# ನಳಪಾಕ

(ನಾಲ್ಕು ಏಕಾಂಕ ನಾಟಕಗಳು)



ಲೇಖಕರು:



"ಶ್ರೀವತ್ಸ"



ಎಚ್. ಎನ್. ರಾವ್ ಬ್ರದರ್ಸ್

ಚಿಕ್ಕಪೇಟೆ, ಬೆಂಗಳೂರು.

# ಪಾತ್ರಗಳು

---

## ಪುರುಷರು

ಬಾಲರೂಪಿರಾಮಪ್ರಿಯ ಶ್ರೀ ರಾಮಾನುಜಾಚಾರ್ಯ

ಬಾದಷಹ

## ಸ್ತ್ರೀಯರು

ಮುಮತಾಜ್ ಬೇಗಂ (ಬೀಬಿ ನಾಚ್ಚಿಯಾರ್)

ನೂರ್ ಉನ್ನೀಸಾ

ಭದ್ರ.



## ೧ “ಬೀಬಿ ನಾಚ್ಚಿಯಾರ್”

### ದೃಶ್ಯ:—೧

[ಯದುಗಿರಿಯ [illegible] ರಾಮಾನುಜರು, [illegible] ಮಲಗಿರುತ್ತಾರೆ]

**ರಾಮಾನುಜ :**—ಆಹಾ ! ಎಂತಹ ವಿಚಿತ್ರ ಸ್ವಪ್ನ ಇದೇನು ಕನಸೋ ! (ಸುತ್ತಲೂ ನೋಡಿ) ಇಲ್ಲ, ಇಲ್ಲ, ಇದೇ ಯದುಗಿರಿಯು ತಪ್ಪಲು. ನಾನು ಸ್ನಾನಪಾನದ ತೃಪ್ತಿ [illegible]—ಮಲಗಿದಾಗ, ಆ ಸ್ವಪ್ನದಲ್ಲಿ ಏನು ?— ಸುಂದರ ನಗರ- ರಾಜನ ವನ ಮಧ್ಯದಲ್ಲಿಯ ವನಸುಂದರಿಯೊಡನೆ ನನ್ನ ಸ್ವಾಮಿ. ಪರಾಧೀನ, ಎಂತಹ ಲೀಲೆಯಿದು. ನಿನ್ನೊಡನೆ ವಿಹರಿಸಲು ಶ್ರೀದೇವಿ ಇರಲಿಲ್ಲವೇ. ಭೂದೇವಿ ಎಲ್ಲಿ ಹೋದಳು--ಹದಿನಾರು, ಸಹಸ್ರ ಗೋಪಿಕಾಂಗನೆಯರೂ ನಿನ್ನನ್ನು ತ್ಯಜಿಸಿದರೇ ? ಶ್ರೀ ಹರಿ, ಯವನ ತರುಣಿಯೊಡನೆ ವಿಹರಿಸಲು ನಿನಗೆ ಮನಸ್ಸು ಹೇಗೆ ಒಪ್ಪಿತು........ಛೇ, ನಿನ್ನ ಮಹಿಮೆಯನ್ನು ಅರಿಯದ ನಾನೆಂತಹ ಮೂರ್ಖ ವಿಶ್ವನ್ನಾಯಕನಾದ ನಿನಗೆ ಜಾತಿ ಮಾತ್ಸರ್ಯವಿಲ್ಲ. ಆಕೆಯು ಅನ್ಯಮತೀಯಳಾದರೇನು ? ನೀನೊಲಿದ ಮೇಲೆ ಆಕೆ ಲೋಕಮಾನ್ಯಳಾದಳು. ಆ ಭಾಗ್ಯವತಿಯ ಬಳಿಯಲ್ಲಿ ನೀನಿರುವುದರಿಂದ ನಮ್ಮನ್ನೆಲ್ಲಾ ಮರೆತೆಯಾ ? ನಿನ್ನನ್ನು ಬಿಟ್ಟರೆ ನಮಗಾರುಗತಿ—ಶ್ರೀಧರಾ ನಮ್ಮ ಮೇಲೆ ದಯಮಾಡಿ ಇಲ್ಲಿಗೆ ಬರಲೊಲ್ಲೆಯಾ—

**(ಗಗನವಾಣಿ)**—ಭಕ್ತಾ, ರಾಮಾನುಜಾ, ನೀನೇ ದೆಹಲಿ ನಗರಕ್ಕೆ ಬಂದು ನನ್ನನ್ನು ಕರೆತಂದರೆ, ನಿನ್ನೊಡನೆ ಬರಲು ಸಿದ್ಧನಿರುವೆನು.

**ರಾಮಾನುಜ :**—ಆಹಾ. ನಾನು ಧನ್ಯನಾದೆ. ಪರಮಾತ್ಮ ನಿನ್ನ ಅಪ್ಪಣೆಯಂತೆ ಈಗಲೇ ದೆಹಲಿಗೆ ಬರುವೆನು. ಬಾದಷಹನನ್ನು ಒಪ್ಪಿಸಿ

ಮರಳಿ ನಿನ್ನನ್ನು ಇಲ್ಲಿಗೆ ಕರೆತರುವೆನು. ಜೈ ಯದುಗಿರಿನಿಲಯಾ, ಶ್ರೀ ರಾಮಪ್ರಿಯಾ-ಜೈ-

(ಹೊರಡುವನು)

## ದೃಶ್ಯ:—೨

### (ಕೆಲವು ದಿನಗಳ ನಂತರ)

[ದೆಹಲಿಯಲ್ಲಿ ರಾಜಕುಮಾರಿಯ ಅಂತಃಪುರ; ಷಹಜಾದಿ ಕುಳಿತು ಚಿಂತಿಸುತ್ತಿದ್ದಾಳೆ]

**ಷಹಜಾದಿ ಮಮ್ತಾಜ್ :**—ಆಹಾ, ಎಂತಹ ಸುಂದರ ನನ್ನ ಚಲುವ—ನನ್ನೊಡನೆ ಎಷ್ಟು ಸರಸವಾಗಿ ಮಾತನಾಡುವನು ; ಆ ಕೊಳಲನ್ನು ಎಷ್ಟು ಮನೋಹರವಾಗಿ ನುಡಿಸುವನು. ಆ ನಾದವನ್ನು ಕೇಳಿದರೆ ನನ್ನ ದೇಹವೇ ಮರೆಯುತ್ತದೆ. ಮನಸ್ಸು ಗಾಳಿಯಂತೆ ನಲಿಯುತ್ತದೆ. ನಾನು ಯವನ ಸ್ತ್ರೀ ; ಆತನು ಹಿಂದುಗಳ ದೈವ—ಆದರೂ ಆತನ ಬಳಿಯಲ್ಲಿದ್ದರೆ ನನಗೆ ಅತ್ಯಂತ ಸುಖವಾಗುತ್ತದೆ. ಜಾತಿಗೆ ಭೇದವಿದ್ದರೂ ಪ್ರೀತಿಗೆ ಭೇದವಿಲ್ಲವಷ್ಟೆ. ಕಳೆದ ರಾತ್ರಿ ಕನಸಿನಲ್ಲಿ ನನ್ನ ಬಳಿಗೆ ಬಂದನು. ಪ್ರತ್ಯಕ್ಷವಾಗಿ ನೋಡಬೇಕೆಂದು ಬಯಸಲು, ಇಂದು ಯಮುನಾ ತಟಕ್ಕೆ ಅಲಂಕೃತಳಾಗಿ ಬಂದರೆ ದರ್ಶನಕೊಡುವೆನೆಂದನು. ಆತನು ಹೇಳಿದಂತೆ ನನ್ನನ್ನು ಅಲಂಕರಿಸುವ ಚತುರೆ ಯಾರು ? ಇರಲಿ—ನಮ್ಮ ಮಂತ್ರಿಕುವರಿಯಾದ ಭದ್ರೆಯನ್ನು ಕೇಳುವೆನು.

**ನೂರ್ ಉನ್ನೀಸ್ :**—(ಪ್ರವೇಶಿಸಿ) ಬೀಬೀ ಸಾಹೇಬಾ, ಅಲಂಕಾರಕ್ಕೆ ವೇಳೆಯಾಯಿತು. ಸಾಮಗ್ರಿಗಳು ಸಿದ್ಧವಾಗಿವೆ.

**ಷಹಜಾದಿ :**—(ಉತ್ಸಾಹದಿಂದ) ಯಾರು ! ನೂರ್ ಉನ್ನೀಸ! ಯಾವಾಗ ಬಂದೆಯೋ ? ನಾನು ಬಯಸುವಂತೆ ನನ್ನನ್ನು ಅಲಂಕರಿಸುವೆಯಾ ?

**ನೂರ್ :**—ಲೋಕ ಮೋಹಿನಿಯಾದ ನಿಮ್ಮನ್ನು ಅಲಂಕರಿಸಬೇಕೇ, ಸಾಹೇಬಾ ? ಮೊದಲೇ ಅನುಪಮ ಲಾವಣ್ಯ ; ಇನ್ನು ಈ ವಸಾ ಭ

ಆಭರಣಗಳಿಂದ ಅಲಂಕರಿಸಿದರೆ ಕೇಳಬೇಕೇ :—ಇಲ್ಲಿ ನೋಡಿ, ಪರ್ಷಿಯಾ ದೇಶದ ಸುಲ್ತಾನರು ಪ್ರೇಯಸಿಗಾಗಿ ಕಳುಹಿಸಿರುವ ಈ ಅಲಂಕಾರವಸ್ತು—

**ಷಹಜಾದಿ** :—(ಕೋಪದಿಂದ) ಯಾರೇ ಪ್ರೇಯಸಿ ? ಯಾವ ಸುಲ್ತಾನನೇ ಇದನ್ನು ಕಳುಹಿಸಿದವನು ? ದೇವದೇವನ ಪ್ರಿಯಕರಳಾದ ನನ್ನನ್ನು ವರಿಸುವ ಧೈರ್ಯ ಉಳ್ಳ ಸುಲ್ತಾನರಾರಿ ? ನನ್ನ ಚಲುವನಲ್ಲದೆ ಅನ್ಯರ ಸಹವಾಸವೇ ಬೇಡ.

**ನೂರ್** :—ಕುಮಾರಿ, ಇಷ್ಟು ಕೋಪವೇಕೆ. ಬಾದಷಹರೇ ಈ ಉಡುಪನ್ನು ನಿಮ್ಮ ಬಳಿಗೆ ಕಳುಹಿಸಬೇಕೆಂದರು. ಆದ್ದರಿಂದ ತಂದೆನು. ನನ್ನನ್ನು ಕ್ಷಮಿಸಿ. ಆದರೆ............

**ಷಹಜಾದಿ** :—ಆದರೇನು ? ಅರ್ಧದಲ್ಲೇ ಏಕೆ ನಿಲ್ಲಿಸಿದೆ ?

**ನೂರ್** :—ತಾಯಿ, ಎಷ್ಟು ದಿನ ತಮ್ಮ ಈ ಹಟ. ಇಂದಲ್ಲ ನಾಳೆಯಾದರೂ ನಿಮ್ಮ ವಿವಾಹವು ಓರ್ವ ಸುಲ್ತಾನನೊಡನೆ ನಡಿಯಲೇಬೇಕು.

**ಷಹಜಾದಿ** :—ನಡಿಯಲೇಬೇಕು ! ಖಂಡಿತವಾಗಿ ನಡೆಯಲು ಸಾಧ್ಯವಿಲ್ಲ. ನನ್ನ ಚಲುವನು, ಪ್ರಿಯೆಯಾದ ನನ್ನನ್ನು ಎಂದಿಗೂ ಕೈಬಿಡನು ; ಅನ್ಯರಿಗೆ ವಶಪಡಿಸನು.

**ನೂರ್** :—ಬೀಬೀ ಸಾಹೇಬಾ, ಆ ವಿಗ್ರಹವನ್ನು ನಿಮ್ಮ ಪ್ರಿಯಕರನೆಂದು ಹೇಳುವ ನಿಮ್ಮ ಹುಚ್ಚಿಗೆ ಏನೆಂದು ಹೇಳಲಿ! ಪರ್ಷಿಯಾ ಚಕ್ರವರ್ತಿನಿಯಾಗುವ ತಮಗೆ ಈ ಬೊಂಬೆಯ ಆಸೆಯೇಕೆ? (ಭದ್ರೆ ಬರುವಳು)

**ಷಹಜಾದಿ**:—ವಿಗ್ರಹ-ಅವಿವೇಕಿಯಾದ ನಿನ್ನ ಕಣ್ಣಿಗೆ ಬೊಂಬೆ ಇರಬಹುದು. ಆದರೆ ಪ್ರೀತಿಯಿಂದ ನೋಡುವ ನನಗೆ, ನನ್ನ ಚಲುವನು ಸುಂದರನಾದ ಯುವಕ—ಭದ್ರಾ, ನೀನು ಹೇಳೆ, ಚಲುವನು ಸುಂದರನಲ್ಲವೇನೇ ?

**ಭದ್ರ**:—ರಾಜಕುಮಾರಿ, ನಮ್ಮ ದೇವದೇವನಲ್ಲಿ ನಿಮಗಿರುವ ಪ್ರೀತಿಯನ್ನು ನೋಡಿದರೆ ನಮಗೇ ಆಶ್ಚರ್ಯವಾಗುತ್ತದೆ. ಆದರೆ ತಾವು ಹೇಳಿದಂತೆ ಆತನು ಅತಿ ಮನೋಹರನು — ನಂಬಿದವರನ್ನು ರಕ್ಷಿಸುವ ಮಹಾ ಕರುಣಾಮಯನು.

**ನೂರ್**:—ಸಾಕು. ಸಾಕು ಇಂತಹ ಕಟ್ಟು ಕಥೆಗಳನ್ನು ಕೇಳಿಯೇ ನಮ್ಮ ರಾಜಕುಮಾರಿ ಹೀಗಾದುದು.

**ಷಹಜಾದಿ**:—ನೂರ್ ಉನ್ನೀಸಾ. ಇವು ಕಟ್ಟುಕಥೆಯಲ್ಲ. ಸತ್ಯ. ರಾತ್ರಿ ನನ್ನ ಸ್ವಪ್ನದಲ್ಲಿ ಬಂದು, ನನ್ನನ್ನು ಯಮುನಾತಟಕ್ಕೆ ವಿಹಾರಕ್ಕಾಗಿ ಕರೆದಿರುವನು. ಇದಕ್ಕಿಂತ ಸತ್ಯವಿದೆಯೇ !

**ನೂರ್**:—ಸತ್ಯವಲ್ಲ, ತಾವು ಹೇಳಿದಂತೆ ಸ್ವಪ್ನ.

**ಷಹಜಾದಿ**:—ಭದ್ರ. ಅವಳ ಮಾತಿಗೇನು, ನೀನು, ನಾನು ಹೇಳುವಂತೆ ಅಲಂಕರಿಸುವೆಯಾ ? ಹಾಗೆ ಶೃಂಗರಿಸಿಕೊಂಡು, ಯಮುನಾತಟಕ್ಕೆ ಹೋದರೆ, ನನ್ನ ಚೆಲುವನು ಪ್ರತ್ಯಕ್ಷನಾಗಿ ನನ್ನೊಡನೆ ನಲಿಯುವ ನಂತೆ.

**ಭದ್ರ**:—ಆಗಲಿ ತಾಯಿ ತಮ್ಮ ಅಪ್ಪಣೆ

**ನೂರ್**:—(ಸ್ವಗತ) ನಡೆಯಲಿ, ಈ ಹುಚ್ಚು ಎಲ್ಲಿಯವರೆಗೆ ನಡೆಯು ವುದೋ ?

**ಷಹಜಾದಿ**:—ಭದ್ರ, ನನಗೆ ಹೆರಳುಹಾಕು, ಮಲ್ಲಿಗೆದಂಡೆಯನ್ನು ಮುಡಿಸು-ಎಳೆ ಹಸುರಿನ ಬಣ್ಣದ ಸೀರೆಯನ್ನು ಹಿಂದೂ ರಮಣಿ ಯರ ರೀತಿಯಂತೆ ಉಡಿಸು ; ಗಿಳಿ ಹಸುರಿನ ಕಂಚುಕವನ್ನು ತೊಡಿಸು-ನಡುವಿಗೆ ಒಡ್ಯಾಣ, ಕಾಲಲ್ಲಿ ಬಂಗಾರದ ಕಾಲ್ಸರ, ಕೈಗೆ ಕಂಕಣ, ಕೊರಳಿಗೆ ಏಕಾವಳಿ-ಹಣೆಗೆ ಕಸ್ತೂರಿಯ ಬಟ್ಟನಿಡು- ನಂತರ ಗುಲಾಬಿ ಬಣ್ಣದ ಜರದ ಮೇಲ್ಮುಸಗನ್ನು ಹಾಕು- ಆ ಮೇಲೆ ಯಮುನೆಯ ಬಳಿಗೆ ಹೋಗೋಣ.

**ಭದ್ರ**:—ಆಗಲಿ ತಾಯಿ. (ತೆರೆ ಬೀಳುವುದು)

## ದೃಶ್ಯ:—೩

(ದೆಹಲಿ ಸುಲ್ತಾನನ ಅಂತಃಗೃಹ)

[ರಾಮಾನುಜಾಚಾರ್ಯರೂ, ಬಾದಷಹನೂ ಮಾತನಾಡುತ್ತಿರುವರು]

**ಬಾದಷಹ**:—ಅಯ್ಯಾ ನಮ್ಮ ಭಂಡಾರವನ್ನೆಲ್ಲಾ ಹುಡುಕಿಸಿದರೂ, ನಿನಗೆ ಬೇಕಾದ ಮೂರ್ತಿಯಿಲ್ಲವೆಂದ ಮೇಲೆ, ಅದು ನಮ್ಮ ಬಳಿಯಲ್ಲಿಲ್ಲ. ನೀನು ಹೊರಡಬೇಕಾಗುವುದು.

**ರಾಮಾನುಜ:**—ರಾಜನ್, ನಿಮ್ಮ ಬಳಿಯಲ್ಲಿಯೇ ಇರುವೆನೆಂದು ನನ್ನ ಸ್ವಾಮಿಯು ಸ್ವಪ್ನದಲ್ಲಿ ಹೇಳಿರುವನು. ಆದ್ದರಿಂದ ನಿಮ್ಮ ಅರಮನೆಯನ್ನೆಲ್ಲಾ ಹುಡುಕಿಸಬೇಕೆಂದು ಬೇಡುತ್ತೇನೆ.

**ಬಾದಷಹ:**—ನೀನು ಮೂರ್ಖನಿರುವೆ. ಸ್ವಪ್ನದಲ್ಲಿ ಕಂಡುದನ್ನು ಸತ್ಯವೆಂದು ಭಾವಿಸುವ ಅತಿ ಮೂರ್ಖನೇ ನೀನು.

**ರಾಮಾನುಜ:**—ಕ್ಷಮಿಸು ರಾಜೇಂದ್ರ. ನಾನು ಸುಳ್ಳಾಡುವನಲ್ಲ. ನನ್ನ ಸ್ವಾಮಿಯು, ತಮ್ಮ ಪ್ರಿಯಕುಮಾರಿಯ ಕೇಳೀಗೃಹದಲ್ಲಿರುವನು.

**ಬಾದಷಹ:**—ಬ್ರಾಹ್ಮಣಾ, ಎಚ್ಚರಿಕೆಯಿಂದ ಮಾತನಾಡು. ಅಂತಃಪುರದ ಗೌರವಕ್ಕೆ ಚ್ಯುತಿ ಬಂದರೆ ತಕ್ಕ ಶಿಕ್ಷೆಯಾದೀತು. ರಾಜಕುಮಾರಿಗೆ ನಿನ್ನ ಮೂರ್ತಿಯಿಂದ ಏನು ಪ್ರಯೋಜನ.

**ರಾಮಾನುಜ:**—ಹಾಗಲ್ಲ ರಾಜನ್, ತಮ್ಮ ಕುಮಾರಿಯು, ಸತ್ಯವಾಗಿ ನನ್ನ ಸ್ವಾಮಿಯ ಮನ ಒಲಿಸಿರುವಳು. ಆತನು ಆಕೆಯ ಬಳಿಯಲ್ಲಿಯೇ ಇರುವನು ಇದು ಸುಳ್ಳಾದರೆ ತಮಗೆ ತೋಚಿದ ಶಿಕ್ಷೆಗೆ ಸಿದ್ಧನಿರುವೆನು.

**ಬಾದಷಹ:**—ಹಾಗಾದರೆ ಈಗಲೇ ಪರೀಕ್ಷಿಸುವೆನು. ನಡೆ, ಅಂತಃಪುರಕ್ಕೆ ಹೋಗೋಣ.

(ಹೊರಡುವರು)

## ದೃಶ್ಯ:—೪

[ಷಹಜಾದಿಯ ಅಂತ:ಪುರ. ಭದ್ರೆಯು ಮುಮುತಾಜಬೇಗಂಳನ್ನು ಹಿಂದೂರಮಣಿಯರ ರೀತಿ ಅಲಂಕರಿಸಿದ್ದಾಳೆ.]

**ಭದ್ರ:**—ಆಹಾ, ತಾವು ಸತ್ಯವಾಗಿ ಧನ್ಯರು ತಾಯಿ. ಈ ಅಲಂಕಾರವು ನನ್ನ ಸ್ವಾಮಿಗೆ ಅತ್ಯಂತ ಪ್ರಿಯಕರವಾದುದು. ದೇವದೇವನ ಪ್ರಿಯಳಾದ ರಾಧೆಯ ಅಲಂಕಾರವೇ ಇದು. ಅಲ್ಲದೆ ಭುವನ ಸುಂದರಿಯಾದ ತಾವು ಈ ಉಡುಪನ್ನು ಧರಿಸಿದ ಮೇಲೆ, ಪ್ರತ್ಯಕ್ಷ ರಾಧೆಯೇ ಎನಿಸಿದಿರಿ. ರಾಜಕುಮಾರಿ ಈ ಕನ್ನಡಿಯಲ್ಲಿ ನೋಡಿ; ತಾವೆಂತಹ ಸುಂದರಿ ಎಂದು ತಿಳಿಯುವುದು.

**ಷಹಜಾದಿ:**—ಸಖೀ, ನನ್ನ ಚಲುವನು ಒಪ್ಪುವಂತಿದ್ದರೆ ಸಾಕು. ಚತುರೆಯಾದ ನಿನಗೆ ಏನು ಬಹುಮಾನ ಕೊಡಲೀ?

**ಭದ್ರ:**—ಒಂದು ಕೋರಿಕೆಯಿದೆ. ನಡೆಸಿಕೊಟ್ಟರೆ ಅದೇ ಬಹುಮಾನ.

**ಷಹಜಾದಿ:**—ಏನದು, ಭದ್ರಾ.

**ಭದ್ರ:**—ದಯಮಾಡಿ ತಾವೂ ಆ ವಿಗ್ರಹದ ಬಳಿಯಲ್ಲಿ ಕುಳಿತರೆ ನಿಮ್ಮೀರ್ವರನ್ನು ಕಣ್ಣಾರೆ ನೋಡಿ, ರಾಧಾಕೃಷ್ಣರನ್ನೇ ಪ್ರತ್ಯಕ್ಷವಾಗಿ ನೋಡಿದಂತೆ ಭಾವಿಸುವೆನು.

**ಷಹಜಾದಿ:**—ಆಗಬಹುದು. (ಹೋಗಿ ಕೂರುವಳು)

**ಭದ್ರ:**—ಧನ್ಯಳಾದೆ ತಾಯಿ. ನನ್ನ ಸ್ವಾಮಿಯನ್ನೂ, ಆತನ ಪ್ರಿಯಕರಳಾದ ತಮ್ಮನ್ನೂ ಕಂಡು ಧನ್ಯಳಾದೆ. ತಮಗೆ ದೃಷ್ಟಿಯಾಗದಂತೆ ಆರುತಿ ಮಾಡುವೆನು. ನಂತರ ಯಮುನಾತಟಕ್ಕೆ ಹೊರಡೋಣ.

(ಆರುತಿ ಮಾಡುತ್ತಾ) ॥ ರಾಗ ॥

ಜಗಪತಿ ಹರಿಗೇ। ನಿಗಮಗೋಚರಗೇ ॥
ಖಗವಾಹನ ಲಕ್ಷ್ಮೀ। ರಮಣನಿಗೇ ॥
ಸೊಗಸಿನ ದೆಹಲೀ ನಗರದಿ ನೆಲಸಿದ।
ನಗೆಮೊಗ ಚಲುವಗೆ। ಸುಗುಣಾನ್ವಿತಗೇ ॥
ಮಿಗೆ ಮುಮುತಾಜಳಿಗೊಲಿದವಗೇ। ಮೃಗಧರ ಪ್ರಿಯಸಖ।
ನರಹರಿಗೇ ॥೧॥ ಆರುತಿಗೈವೆ। ಆರುತಿಗೈವೇ।
ನಾರಾಯಣಗೇ। ನಾರದಪ್ರಿಯ ಕರುಣಾಕರ ಹರಿಗೇ ॥

**ಷಹಜಾದಿ:**—ನೂರ್ ಉನ್ನೀಸಾ, ನೀನಿಲ್ಲಿಯೇ ಇರು. ನನ್ನ ಚಲುವನ ಮೂರ್ತಿಯ ಬಳಿಗೆ ಯಾರೂ ಬಾರದಂತೆ ನೋಡುವುದು ನಿನ್ನ ಕೆಲಸ.

**ನೂರ್:**—ಒಂದು ವೇಳೆ ಬಾದಷಹರೇ ಬಂದರೆ—

**ಷಹಜಾದಿ:**—ನನ್ನ ಕೊರಳಾಣೆಯೆಂದು ಹೇಳಿ ತಡೆಯಬೇಕು. ತಿಳಿಯಿತೇ?

ನೂರ್:—ಅಪ್ಪಣೆ.

ಷಹಜಾದಿ:—ಭದ್ರ, ಇನ್ನು ನಾವು ಚಂದ್ರಿಕಾ ಮೋದಕ್ಕೆ ಹೋಗೋಣ. (ಎಂದು ಹೊರಡುವರು)

(ಬಾದಷಹ, ರಾಮಾನುಜರು ಪ್ರವೇಶಿಸುವರು ; ನೂರ್ ಉನ್ನೀಸಾ ಹಂದಿಸುವಳು)

ಬಾದಷಹ:—ನೂರ್ ಉನ್ನೀಸಾ, ಕುಮಾರಿ ಎಲ್ಲಿ ?

ನೂರ್:—ಜಹಪನಾ, ಅವರು ಯಮುನಾತಟದಲ್ಲಿರುವ, ಚಂದ್ರಿಕಾ ಮೋದ ಭವನಕ್ಕೆ ವಿಹಾರಕ್ಕೆ ಹೋಗಿರುವರು.

ಬಾದಷಹ:—(ಸ್ವಲ್ಪ ಕೆರಳಿ) ವಿಹಾರಕ್ಕೆ—ನನ್ನ ಅಪ್ಪಣೆಯಿಲ್ಲದೆ ! ಯಾರೊಡನೆ ಹೋಗಿರುವಳು.

ನೂರ್:—(ಬೆದುರುತ್ತಾ) ಅಂದಾತ – ಅಂದಾತ –

ಬಾದಷಹ:—ಏಕೆ ಈ ಗಾಬರಿ ನೂರ್, ಸತ್ಯವನ್ನು ಹೇಳು ಇಲ್ಲದಿದ್ದರೆ ಕ್ರೂರ ಶಿಕ್ಷೆಯಾದೀತು.

ನೂರ್.—ಅಂದಾತಾ, ಅವರು ತಮ್ಮ ಪ್ರಿಯಕರರೊಡನೆ ವಿಹರಿಸಲು ಅಲ್ಲಿಗೆ ಹೋಗಿರುವರು — ಭದ್ರೆಯೂ ಜೊತೆಯಲ್ಲಿರುವಳು.

ಬಾದಷಹ:—(ಕೋಪದಿಂದ) ಪ್ರಿಯಕರ— ಆ ನೀಚನಾರು ಹೇಳು ನೂರ್. ರಾಜಕುಮಾರಿ ಇಷ್ಟು ಲಜ್ಜೆಗೆಟ್ಟಿರುವಳೇ !

ನೂರ್:—ಜಹಪನ ಕ್ಷಮಿಸಿ ; ಕುಮಾರಿಯವರ ಪ್ರಿಯಕರನೆಂದರೆ ಮಾನವನಲ್ಲ -- ಆಕೆಯ ಶಯನ ಗೃಹದಲ್ಲಿರುವ ಆ ಹಿಂದೂ ವಿಗ್ರಹ. ಆತನೇ ತನ್ನ ಪ್ರಿಯನೆಂದು ಆಕೆಗೆ ಭ್ರಾಂತಿ.

ಬಾದಷಹ:—(ಸ್ವಗತ) ಏನು ಈ ವಿಪರೀತ ! ಆ ವಿಗ್ರಹದಿಂದ ಅಂತಃಪುರದಲ್ಲಿ ಇಷ್ಟು ಅನಾಹುತ. ಆಗಲಿ -- ಈ ಬ್ರಾಹ್ಮಣನೊಡನೆ ಅದನ್ನು ಕಳಿಸಿದರೆ ನನ್ನ ಮಗಳ ಭ್ರಾಂತಿ ಪರಿಹಾರವಾಗಬಹುದು. (ಪ್ರಕಾಶ) ನೂರು - ಆ ವಿಗ್ರಹವೆಲ್ಲಿದೆ.

ನೂರ್:—ಕ್ಷಮಿಸಬೇಕು. ಕುಮಾರಿಯವರು, ಅದರಗೊಡವೆಗೆ ಯಾರೂ ಬಾರದಂತೆ ನೋಡಿಕೊಳ್ಳಲು ನನಗೆ ಅಪ್ಪಣೆ ಮಾಡಿದ್ದಾರೆ.

**ಬಾದಷಹ**:—ಎಲ್ಲಿದೆ ಹೇಳು ನೂರ್ — ಇಲ್ಲದಿದ್ದರೆ ನಿನಗೆ ತಕ್ಕ ಶಿಕ್ಷೆಯಾದೀತು.

**ನೂರ್**:—ಜಹಪನಾ, ಅದು ಬೀಬಿ ಸಾಹೇಬರ ಶಯ್ಯಾಗೃಹದಲ್ಲಿದೆ. ಅದರ ಬಳಿಗೆ ಯಾರನ್ನೂ ಬಿಡಕೂಡದೆಂದು ಕೊರಳಾಣೆಯಿಟ್ಟು ಹೇಳಿದ್ದಾರೆ.

**ಬಾದಷಹ**:—ಆಗಲಿ ನನ್ನ ಮಗಳ ಮನನೋಯದಂತೆ ಈ ವಿಗ್ರಹವನ್ನು ಇಲ್ಲಿಂದ ಸಾಗಿಸಲು ಏರ್ಪಡಿಸಬೇಕು. ಅಯ್ಯಾ. ಬ್ರಾಹ್ಮಣಾ, ನಿನ್ನ ದೇವನ ಮೂರ್ತಿ ನನ್ನ ಮಗಳ ಶಯ್ಯಾಗೃಹದಲ್ಲಿದೆಯಂತೆ. ಆಕೆಯು ಯಾರನ್ನೂ ಒಳಗೆ ಪ್ರವೇಶಿಸದ ಹಾಗೆ ಹೇಳಿ ವಿಹಾರಕ್ಕೆ ಹೋಗಿರುವಳು. ನೀನಂತಹ ಭಕ್ತನಾದರೆ, ಹೊರಗಿನಿಂದಲೇ ಕೂಗಿ ಕರೆದು ನೋಡು. ಬಂದರೆ ಕರೆದುಕೊಂಡು ಹೋಗು.

**ರಾಮಾನುಜ**:—ರಾಜರ್, ಬಹಳ ಸಂತೋಷ. (ಕೈಮುಗಿದು ನಿಂತು) ಬಾ, ಭಕ್ತಮಂದಾರ, ನನ್ನೊಡನೆ ಬಾ ; ನಿನ್ನ ದಿವ್ಯ ದರ್ಶನದಿಂದ ನನ್ನನ್ನು ಪಾವನಮಾಡು ಬಾ. ಆನೆಯ ಮೊರೆ ಕೇಳಿ ಆತುರದಿಂದ ಬಂದ ಆರ್ತರಕ್ಷಣಾ, ಬೇಗ ಬಾ.

**ಬಾದಷಹ**:—(ನಗುತ್ತಾ) ಅಯ್ಯೋ ಹುಚ್ಚಾ ! ಬಾರೆಂದರೆ ಬೊಂಬೆ ಎದ್ದು ಬರುವುದೇ ; ಇದೇ ಈ ಹಿಂದುಗಳ ಮೂಢ ನಂಬಿಕೆ.

**ರಾಮಾನುಜ**:—ಗೋಪಾಲ, ಯದುಬಾಲ, ನೀನು ಬಾರದಿಹ್ದರೆ, ನನ್ನ ಮಾನಕ್ಕೆ ಚ್ಯುತಿ ಬರುವುದು. ಮಾನಿನೀ ಮಾನರಕ್ಷಕಾ, ನನ್ನನ್ನು ಕಾಪಾಡು ಬಾ.

(ಇವನೇ ಗಿರಿಜಾ ರಮಣನು) ಎಂಬಂತೆ

ಬಾರೈ ಫಣಿರಾಜ ಶಯನಾ। ಬಾರೈ ಸರಸೀರುಹ ನಯನಾ ||
ಬಾರೈ ದಿವಿಜಪತಿನುತ ಚರಣಾ || , ಬಾ ಬಾರೈ ವನಮಾಲಿಕ್ಕ||—
(ರಾಮಾನುಜರು ಹಾಡುತ್ತಿರುವಾಗ ಬಾಗಿಲು ತೆಗೆದು ಚಲುವನು ನರ್ತನಮಾಡುತ್ತಾ ಬರುವನು.)

**ಶ್ರೀ ಚಲುವ**:—ಭಕ್ತಾ, ರಾಮಾನುಜಾ, ಇಗೋ ಬಂದಿರುವೆನು ನೋಡು.

**ರಾಮಾನುಜ**:—ಸಂಪತ್ಕುಮಾರಾ ಬಂದೆಯಾ ; ನನ್ನಪ್ಪಾ ಇಂದು ನನ್ನನ್ನು ರಕ್ಷಿಸಿದೆ. ನನ್ನೊಡನೆ ಕೃಪೆಮಾಡಿ ಯದುಗಿರಿಗೆ ಬಾ.

ಬಾಲರೂಪಿನಿಂದಿರುವ ನಿನ್ನನ್ನು ನನ್ನ ಹೆಗಲೇರಿಸಿ ಕರೆದೊಯ್ಯು ವೆನು. ಬಾದಷಹಾ, ನಿನ್ನ ದಯೆಯಿಂದ ನನ್ನ ಸ್ವಾಮಿಯು ನನಗೆ ದೊರಕಿಡನು. ನಾನಿನ್ನು ಬರುವೆನು. ಅಪ್ಪಣೆ ಕೊಡು.

**ಬಾದಷಹ:**—ಏನೀ ಅಚ್ಚರಿ! ವಿಗ್ರಹವು ಬಾಲರೂಪಿನಿಂದ ಬಂದಿರುವುದಲ್ಲಾ! ಬ್ರಾಹ್ಮಣ ಶ್ರೇಷ್ಠಾ, ನಿನ್ನ ದೇವರನ್ನು ನೀನು ಕರೆದು ಕೊಂಡು ಹೋಗಬಹುದು. (ರಾಮಾನುಜಾಚಾರ್ಯ ಹೊರಟ ಮೇಲೆ) ಸಧ್ಯ ನನ್ನ ಅರಮನೆಯಿಂದ, ಆ ವಿಗ್ರಹವು ಹೋದದ್ದು ಬಹಳ ಮೇಲಾಯಿತು. ಇನ್ನುಮೇಲಾದರೂ ನನ್ನ ಮಗಳ ಭ್ರಾಂತಿ ಪರಿಹಾರವಾಗುವುದು. (ಹೊರಡುವನು)

**ನೂರ್:**—ಜಹಪನಾ, ರಾಜಕುಮಾರಿಯುವರು, ಆ ವಿಗ್ರಹವು ಇಲ್ಲದಿರುವುದನ್ನು ಕಂಡರೆ, ನನ್ನ ಮೇಲೆ ಸಿಟ್ಟಾಗುವರು. ಏನೆಂದು ಹೇಳಲಿ.

**ಬಾದಷಹ:**—(ನಗುತ್ತಾ) ದಕ್ಷಿಣ ದೇಶದಿಂದ ಬಂದ ಬ್ರಾಹ್ಮಣನೋರ್ವನು ಕರೆಯಲು, ನಿನ್ನನ್ನು ತ್ಯಜಿಸಿ ಆ ವಂಚಕನು ಹೊರಟಹೋದನೆಂದು ಹೇಳು.

**ನೂರ್:**—ಅಪ್ಪಣೆ ಪ್ರಭು. (ಬಾದಷಹ ಹೊರಡುವನು)

(ನಿರಾಶಳಾದ ರಾಜಕುಮಾರಿಯು ಭದ್ರೆಯೊಡನೆ ಬರುವಳು)

**ಷಹಜಾದಿ:**—ಭದ್ರಾ, ಇಂದೇಕೆ ಚೆಲುವನು ನನ್ನ ಆಶಾಭಂಗಮಾಡಿದನು. ಯಾವ ಅಪರಾಧಕ್ಕಾಗಿ ನನಗೆ ಇಂತಹ ಶಿಕ್ಷೆ.

**ನೂರ್:**—ಷಹಜಾದಿಸಾಹೇಬಾ, ಈಗಲಾದರೂ ತಿಳಿಯಿತೇ, ಆ ಹಿಂದೂ ದೇವನು ವಂಚಕನೆಂದು. ಕನಸ್ಸಿನಲ್ಲಿ ನಂಬಿಕೆಯಿಟ್ಟರೆ ಇದೇ ಫಲ.

**ಷಹಜಾದಿ:**—ನೂರ್ ನಿನಗೆ ತಿಳಿಯದು. ಆತನೆಂದಿಗೂ ನನ್ನನ್ನು ವಂಚಿಸುವನಲ್ಲ. ಏನೋ ಮಹತ್ಕಾರಣದಿಂದ ನನ್ನ ಬಳಿಗೆ ಬಾರದಿರಬಹುದು. ಅಲ್ಲವೇ ಭದ್ರ?

**ಭದ್ರ:**—ರಾಜಕುಮಾರಿ, ನಮ್ಮ ಸ್ವಾಮಿಯು ಭಕ್ತಪರಾಧೀನನು. ಯಾವನೋ ಭಕ್ತನು ಕೂಗಿರಬೇಕು. ಆದುದರಿಂದ ಪ್ರೇಯಸಿಯಾದ ನಿಮ್ಮನ್ನು ಸಹಾ ಬಿಟ್ಟು ಅಲ್ಲಿಗೆ ಹೋಗಿರುವನು.

**ಷಹಜಾದಿ**:—ನನ್ನನ್ನು ಸಹಾ ಪುರೆಯುವಂತೆ ಮಾಡಿ, ತನ್ನ ಬಳಿಗೆ ಕರೆಸಿಕೊಂಡ ಆ ಭಕ್ತನಾರೇ, ನನ್ನ ಚಲುವನನ್ನೇ ಕೇಳಿ ತಿಳಿಯುವೆನು (ಬಾಗಿಲು ತೆಗೆದಿರುವುದನ್ನು ನೋಡಿ) ನೂರ್, ಏನಿದು. ನನ್ನ ಮಂದಿರದ ಬಾಗಿಲು ತೆರೆದಿದೆ. ಯಾರು ಬಂದಿದ್ದರು. ನನ್ನ ಚಲುವನೆಲ್ಲಿ?

**ನೂರ್**:—ಬೀಬೀಸಾಹೇಬಾ, ಯಾವನೋ ಯದುಗಿರಿಯ ಬ್ರಾಹ್ಮಣನು, ತನ್ನ ದೇವರು ನಿಮ್ಮ ಅಂತಃಪುರದಲ್ಲಿ ಇರುವುದೆಂದು ಹೇಳಿದನಂತೆ; ಅದನ್ನು ಪರೀಕ್ಷಿಸಲು, ನೀವು ಹೊರಟಮೇಲೆ ಸುಲ್ತಾನರೇ ಇಲ್ಲಿಗೆ ಬಂದಿದ್ದರು. ನಾನು ನಿಮ್ಮ ಅಪ್ಪಣೆಯನ್ನು ತಿಳಿಸಿದೆನು. ಆ ಬ್ರಾಹ್ಮಣನು ಏನೋ ಪ್ರಾರ್ಥನೆ ಮಾಡಲು, ಆ ವಿಗ್ರಹವು ಬಾಲಕನ ರೂಪಿನಿಂದ ಹೊರಗೆ ಬಂದು, ಆತನೊಡನೆ ಹೊರಟು ಹೋದನು. ನೀವು ಇನ್ನುಮೇಲಾದರೂ ಇಂತಹ ವಂಚಕ ದೇವರ ಸಹವಾಸವನ್ನು ಬಿಡಬೇಕೆಂದು ಬಾದಷಹರೇ ಅಪ್ಪಣೆ ಮಾಡಿರುವರು.

**ಷಹಜಾದಿ**:—ಆಹಾ ಮೋಸವಾಯಿತು. ನನ್ನ ಚಲುವನು ನನ್ನನ್ನು ತ್ಯಜಿಸಿದನೇ? ಪ್ರಿಯ ಚಲುವಾ, ನನ್ನನ್ನು ವಂಚಿಸಿದೆಯಾ? ಆ ಬ್ರಾಹ್ಮಣನೊಡನೆ ಹೊರಡುವಾಗ ಈ ಅಬಲೆಯನ್ನು ಮರತೆಯಾ; ಇದು ನಿನಗೆ ಧರ್ಮವೇ?—ಇಲ್ಲ, ಇಲ್ಲ ನನ್ನ ಪ್ರಿಯನು ವಂಚಕನಲ್ಲ. ಆ ಬ್ರಾಹ್ಮಣನು ಕೂಗಿದೊಡನೆ ಬಾರದಿದ್ದರೆ ಕೋಪಾಕ್ರಾಂತನಾಗ ನನ್ನ ತಂದೆಯು ಆತನನ್ನು ಶಿಕ್ಷಿಸಬಹುದೆಂದು ಈ ರೀತಿ ಮಾಡಿರುವನು. ನನ್ನ ಚಲುವನು ಎಂತಹ ಕರುಣಾಮಯನು. ಆದರೆ ನನ್ನ ಗತಿಯೇನು.

**ಭದ್ರ**:—ಕುಮಾರಿ, ಸಂತೈಸಿಕೊಳ್ಳಿರಿ. ನಿಮ್ಮನೆಂದಿಗೂ ಆತನು ಮರೆಯುವನಲ್ಲ.

**ನೂರ್**:—ಚಿಂತೆಯಿಲ್ಲ, ನೀವೇ ಆತನನ್ನು ಮರೆತುಬಿಡಿ ಷಹಜಾದಿ.

**ಷಹಜಾದಿ**:—ನೂರ್ ನೀನು ಹೊರಡು. ನಿನ್ನ ಮಾತನ್ನು ಕೇಳಿದರೆ ನನಗೆ ಮೈಯುರಿಯುವುದು. ಭದ್ರ, ನೀನು ಸಹಾ ಹೊರಡು ನನಗೆ ಓರ್ವಳೇ ಇರಬೇಕೆಂದು ಇಚ್ಛೆಯಿದೆ. (ಇಬ್ಬರೂ ಹೊರಡುವರು.)

ಚಲುವಾ, ಈ ರೀತಿ ಮಾಡಬಹುದೇ ; ನಿನ್ನನಗಲಿ ಹೇಗೆ ಬಾಳಲಿ. ಪ್ರಿಯಕರ ನನಗಾವ ಗತಿ. ಸಾಯುವೆನೆಂದರೆ ಆತ್ಮಹತ್ಯೆಯು ಮಹಾ ಪಾಪವೆನ್ನುವರು. ಬದುಕಿದ್ದರೆ ವಿವಾಹವಾಗೆಂದು ತಂದೆ ಯವರು ಬಲಾತ್ಕರಿಸುವರು. ದೇವದೇವನಾದ ನಿನ್ನ ಪ್ರಿಯ ಪಾತ್ರಳು, ಅನ್ಯರ ಕರ ಪಿಡಿಯಬಹುದೇ. ನನ್ನ ಚಲುವಾ, ನಾನೇನು ಮಾಡಲಿ. (ಯೋಚಿಸಿ) ಯದುಗಿರಿಯ ಬ್ರಾಹ್ಮಣನೊಡನೆ ನೀನು ಹೊರಟೆಯೆಂದು ನೂರ್ ಹೇಳಿದಳು. ಆದರೆ ನನ್ನನ್ನು ಅಲ್ಲಿಗೆ ಕರೆದೊಯ್ಯುವರಾರು. ಹೇಗಾದರಾಗಲಿ, ನನ್ನ ಪ್ರೀತಿಯ ಕುದುರೆ ಯನ್ನೇರಿ ಇಲ್ಲಿಂದ ಪಾರಾಗುವೆನು. ಸರ್ವಪ್ರಾಣಿಗಳ ಹೃದಯ ದಲ್ಲಿರುವ ನೀನು, ನನ್ನ ಕುದುರೆಯಲ್ಲಿಯೂ ಇರುವೆಯಷ್ಟೆ. ನೀನೇ ನಿನ್ನ ಬಳಿಗೆ ಕರೆಸಿಕೊಳ್ಳುವೆ. ಇದೇ ಸರಿಯಾದ ಮಾರ್ಗ. (ಹೊರಡುವಳು)

ತೆರೆಬೀಳುವುದು

## ದೃಶ್ಯ:—೫

[ಯದುಗಿರಿಯ ದೇವಸ್ಥಾನ. ಸಂಪತ್ಕುಮಾರಸ್ವಾಮಿಯ ಪ್ರತಿಷ್ಠೆಯಾಗಿದೆ. ಮಹಾ ಮಂಗಳಾರತಿಯ ಸಮಯ. ರಾಮಾನುಜಾಚಾರ್ಯರು ಸ್ತೋತ್ರ ಮಾಡುತ್ತಿದ್ದಾರೆ.]

**ರಾಮಾನುಜ:**—ದೇವದೇವಾ, ಇಂದು ಧನ್ಯನಾದೆ. ದೆಹಲಿಯಿಂದ ನಿನ್ನನ್ನು ಕರೆತಂದುದು ಸಾರ್ಥಕವಾಯಿತು. ಪ್ರೇಯಸಿಯನ್ನು ಸಹಾ ಮರೆತು, ನಮ್ಮೊಡನೆ ಬಂದ ನಿನ್ನ ಕರುಣೆಯನ್ನು ಎಷ್ಟೆಂದು ಹೊಗಳಲಿ ! (ದೇವರನ್ನು ನೋಡಿ) ಆದರೆ-ಗೋಪಾಲಾ, ನಿನ್ನ ಮುಖವೇಕೆ ಕಾಂತಿಹೀನವಾಗಿದೆ. ಯಾವ ಚಿಂತೆಯು ಬಾಧಿಸು ತ್ತಿದೆ. ಹೇಳು. ನನ್ನಿಂದ ಅಪರಾಧವಿದ್ದಲ್ಲಿ ರಕ್ಷಿಸುವ ಸ್ವಾಮಿಯಾದ ನೀನೇ ಶಿಕ್ಷಿಸಲು ಸಹಾ ಪ್ರಭುವಲ್ಲವೇ ? ನಿನ್ನ ಪ್ರೇಯಸಿಯಿಂದ ನಿನ್ನನ್ನು ಅಗಲಿಸಿದೆನೆಂದು ಕೋಪವೇ ? ನಿನ್ನ ಇಚ್ಛೆಯಿದ್ದರೆ ಆಕೆ ಯನ್ನು ಇಲ್ಲಿಗೆ ಕರೆಸುವುದು ಅಸಾಧ್ಯವೇ ?

**ಷಹಜಾದಿ**:—(ಪ್ರವೇಶಿಸಿ) ಪ್ರಿಯಕರಾ, ಚಲುವಾ !

**ರಾಮಾನುಜ**:—ಯಾರದು ಸ್ತ್ರೀಧ್ವನಿ. (ನೋಡಿ) ಷಹಿಜಾದಿ !–ದೆಹಲಿಯಿಂದ ಇಲ್ಲಿಗೆ ಬಂದಿರುವಳೇ ! ಆಶ್ಚರ್ಯ.

**ಷಹಜಾದಿ**:—(ಗದ್ಗದಸ್ವರದಿಂದ) ಚಲುವಾ, ನನ್ನನ್ನು ಬಿಟ್ಟು ನೀನು ಇಲ್ಲಿಗೆ ಬಂದರೂ, ದಾಸಿಯಾದ ನಾನು, ನಿನ್ನವಿನಃ ಇನ್ನಾರನ್ನು ಆಶ್ರಯಿಸಲಿ. ಅನಾಥಳಾದ ಈ ಬಾಲಿಕೆಗೆ ನೀನೇಗತಿಯಲ್ಲವೇ. ಕರುಣಾಕರಾ, ನನಗೆ ಆಶ್ರಯಕೊಡು. ಮಾರ್ಗಶ್ರಮದಿಂದ ನನ್ನ ಪ್ರಾಣ ಉಳಿಯದು. ಆದರೂ, ಕಡೆಯಲ್ಲಾದರೂ, ನಿನ್ನನ್ನು ಕಂಡ ನಾನು ಧನ್ಯಳು. (ಉದ್ವೇಗದಿಂದ) ಏನು ! ನಿನ್ನ ಬಳಿಗೆ ಬಾರೆಂದು ಕರೆಯುವೆಯಾ ! ನನಗೆ ನಿನ್ನ ಪಾದದಲ್ಲಿ ಸ್ಥಳಕೊಡುವೆಯಾ ! ಮನಮೋಹನಾ, ಚಲುವಾ–ಬಂದೇ–ಬಂದೆ–ಸ್ವೀಕರಿಸು ; ಈ ದಾಸಿಯ ಕರಪಿಡಿದು ಕಾಪಾಡು, ಪ್ರಿಯ - ಚ - ಲು - ವಾ. (ಬೀಳುವಳು)

**ರಾಮಾನುಜ**:—ಆಹಾ, ರಾಜಕುಮಾರಿ ಧನ್ಯೆ. ಪರಮಪುರುಷನ ಪಾದದಲ್ಲಿ ಆಶ್ರಯಪಡೆದ ನೀನೇ ಮಾನಿನೀ ಕುಲಕ್ಕೆ ಮಣಿಯಾಗಿರುವೆ ; ದೇವದೇವನೇ ನಿನ್ನನ್ನು ಸ್ವೀಕರಿಸಿದಮೇಲೆ, ಆಶ್ರಿತರಾದ ನಮಗೆ ನೀನು ಜನನಿ ಎನಿಸಿದೆ. ಧನ್ಯ ತಾಯಿ, ಧನ್ಯೆ. (ಸ್ವಾಮಿಯನ್ನು ನೋಡಿ) ಸ್ವಾಮಿ, ನಿನ್ನಪ್ರಿಯಳ ಆತ್ಮಜ್ಯೋತಿಯು ನಿನ್ನನ್ನು ಸೇರಲು, ನಿನ್ನಮುಖ ಕಾಂತಿಯುತವಾಯಿತು. ಇಂತಹ ಲಲನಾಮಣಿಯಿಂದ ನಿನ್ನನ್ನು ಅಗಲಿಸಿದ್ದ ನನ್ನ ಅಪರಾಧವನ್ನು ಮನ್ನಿಸು.

**ಬಾದಷಹ**:–(ಪ್ರವೇಶಿಸಿ) ಬೇಟೀ, ನನ್ನನ್ನು ಬಿಟ್ಟು ಹೊರಟುಹೋದೆಯಾ?

**ರಾಮಾನುಜ**:—ಬಾದಷಹ !—ರಾಜ್ಯ ಸಂತೈಸಿಕೋ, ನಿನ್ನ ಪ್ರಿಯ ಕುಮಾರಿಯು ಪರಮಾತ್ಮನ ಬಳಿಗೆ ಸೇರಿದಳು.

**ಬಾದಷಹ**:—ಆಚಾರ್ಯ, ಮೋಸಹೋದೆ. ನನ್ನ ಮಗಳ ತಿಳಿವಳಿಕೆ ನನಗಿಲ್ಲವಾಯಿತು. ಯಾರನ್ನು ಆಕೆಯು ದೇವದೇವನೆಂದರಿತಳೋ, ಆತನನ್ನೇ ನಾನು ವಿಗ್ರಹವೆಂದು ತಿಳಿದೆ. ದೇವದೇವನು ಸುಲಭದಲ್ಲಿ

ಅಳಿಯನಾಗುತ್ತಿದ್ದ ಭಾಗ್ಯವನ್ನು ಮೂರ್ಖನಾಗಿ ಕಳೆದುಕೊಂಡೆ. ನನ್ನ ಮುದ್ದಿನ ಮಗಳ ಮರಣಕ್ಕೆ ನಾನೇ ಕಾರಣನಾದೆ.

**ರಾಮಾನುಜ:**—ಬಾದಷಹ ಚಿಂತಿಸಿ ಫಲವಿಲ್ಲ. ಅಂತಹ ಕುಮಾರಿಯನ್ನು ಪಡೆದ ನೀನೂ ರಾಜಶ್ರೇಷ್ಠನೇ ಇರುವೆ. ದೇವನನ್ನು ಒಲಿಸಲು ಭಕ್ತಿ ಮುಖ್ಯವಲ್ಲದೇ, ಜಾತಿಯಲ್ಲವೆಂದು ಈಗಲಾದರೂ ಅರಿತೆಯಾ

**ಬಾದಷಹ:**—ಗುರುದೇವಾ. ಈಗ ತಿಳಿಯಿತು. ಮನ ಬಂದಂತೆ ಮಗಳಿಗೂ ಅಳಿಯನಿಗೂ ಬಳುವಳಿಕೊಡುವ ಭಾಗ್ಯವನ್ನು ಪಾಪಿಯಾದ ನಾನು ಕಳೆದುಕೊಂಡೆ. ಈಗಲಾದರೂ, ದಯಲಿಯಿಂದ, ಈ ದಾಸನು ಕಳುಹಿಸುವ ಅಲ್ಪಕಾಣಿಕೆಯನ್ನು ಸ್ವೀಕರಿಸಲೆಂದು ಬೇಡುತ್ತೇನೆ.

**ರಾಮಾನುಜ:**—ರಾಜೇಂದ್ರ, ನಿನ್ನ ಇಷ್ಟದಂತಾಗಲಿ. ಯದುಗಿರಿನಿವಾಸ, ಶ್ರೀಶಾ, ಯವನ ಯುವತಿಗೆ ಸಹಾ, ನಿನ್ನ ಪಾದದಲ್ಲಿ ಆಶ್ರಯ ಕೊಟ್ಟು, ಜಾತಿಭೇದವಿಲ್ಲನೆಂದು ಜಗತ್ತಿಗೆ ಸಾರಿದ ನಿನ್ನ ಅದ್ಭುತ ಲೀಲೆಯೇ ಲೀಲೆ. ಜೈ ಸಂಪತ್ಕುಮಾರ ಭಗವಾನ್, ಜೈ ಬೀಬಿ ನಾಚ್ಚಿಯಾರ್ ಜೈ.

(ತೆರೆಬೀಳುವುದು)

——:o:——

# ಪಾತ್ರಗಳು

— :o: —

## ಪುರುಷರು

ದಶರಥ

ಸುಮಂತ್ರ

ಋಷಿ

ಋಷಿ ಕುಮಾರ (ಕೌಂಹವ)

## ಸ್ತ್ರೀಯರು

ಕೌಸಲ್ಯ

ಋಷಿ ಪತ್ನಿ

## ೨ “ಶಬ್ದವೇದಿ”

### ದೃಶ್ಯ:—೧

[ಅಯೋಧ್ಯೆಯ ಅರಮನೆ. ಮಹಾರಾಣಿ ಕೌಸಲ್ಯಾದೇವಿ, ಚಿಂತಾಮಗ್ನಳಾಗಿ ಕುಳಿತಿದ್ದಾಳೆ. ಒಡ್ಡೋಲಗದಿಂದ ಹಿಂತಿರುಗಿದ ದಶರಥನ ಪ್ರವೇಶ]

**ದಶರಥ**:— ಕೌಸಲ್ಯಾ!

**ಕೌಸಲ್ಯ**:—.... .... .... ....

**ದಶರಥ**:—ದೇವಿ, ಕೌಸಲ್ಯಾ!!

**ಕೌಸಲ್ಯ**:—(ಎಚ್ಚೆತ್ತು) ಮಹಾರಾಜ! ಪ್ರಭು, ನನ್ನನ್ನು ಕ್ಷಮಿಸಿ

**ದಶರಥ**:—ಕೌಸಲ್ಯಾ, ಏನಿಷ್ಟು ಮೌನ, ಯಾವ ಗಭೀರಯೋಚನೆಯು ನನ್ನ ರಾಣಿಯನ್ನು ಬಾಧಿಸುತ್ತಿದೆ. ಏನಿದು ಕಣ್ಣೀರು? ಕೌಸಲ್ಯಾ, ನಿನ್ನ ಕಣ್ಣಿನಲ್ಲಿ ಹನಿಗೂಡಿಸುವಂತಹ ಚಿಂತೆಯೇನು.

**ಕೌಸಲ್ಯ**:—(ನಿಟ್ಟುಸಿರು) ಇಲ್ಲ, ಮಹಾರಾಜ, ನನಗಾವ ಚಿಂತೆಯೂ ಇಲ್ಲ

**ದಶರಥ**:—ಕಾರಣವಿಲ್ಲದೆ ನಿನ್ನ ಮುಖವೇಕೆ ಕಾಂತಿಗುಂದಿದೆ, ಹೇಳು ಕೌಸಲ್ಯೆ. ಪರಿಜನರ ಅವಿಧೇಯತೆಯೋ? ಅಥವಾ ಸಪತ್ನಿಯರ ಬಿರುನುಡಿಗಳೋ?

**ಕೌಸಲ್ಯ**:— ಇಲ್ಲ ಪ್ರಭು, ನಿಮ್ಮ ಚರಣದಾಸಿಯಾದ ನನ್ನ ಮಾತಿಗೆ ಎದಿರಾಡುವ ಪರಿಜನರೇ ಇಲ್ಲ; ಇನ್ನು ನನ್ನ ತಂಗಿಯರು— ಸ್ವಾಮಿ, ನಿಮ್ಮ ದಯದಿಂದ ನನ್ನನ್ನವರು ಜ್ಯೇಷ್ಠ ಸೋದರಿ ಎಂದು ಭಾವಿಸುವರೇ ವಿನಃ ಕಟು ನುಡಿಗಳಿಗೆ ಕಾರಣವೇ ಇಲ್ಲ.

**ದಶರಥ**:—ಅಂದಮೇಲೆ ಚಿಂತೆಗೆ ಕಾರಣ?

**ಕೌಸಲ್ಯ**:— ನನ್ನ ದೌರ್ಭಾಗ್ಯವೇ ಕಾರಣವಲ್ಲದೆ ಮತ್ತೇನಿರುವುದು?

**ದಶರಥ**:—ಏನು! ಸಾಕೇತ ಸಾಂರಾಜ್ಞಿಯಾದ ನೀನು ಭಾಗ್ಯಹೀನಳೇ! ಅಯೋಧ್ಯಾ ಭಾಗ್ಯಲಕ್ಷ್ಮಿಯಾದ ನಿನಗಿಲ್ಲದ ಭಾಗ್ಯವಾವುದು, ಕೌಸಲ್ಯೆ

**ಕೌಸಲ್ಯ**:—ಪುತ್ರಭಾಗ್ಯ — ಮಹಾರಾಜ, ಇಂದು ಪುರಾಣ ಶ್ರವಣ ಕಾಲದಲ್ಲಿ "ಅಪುತ್ರಸ್ಯ ಗತಿರ್ನಾಸ್ತಿ" ಎಂದು ಕೇಳಿದಾಗಿನಿಂದ ನಾನೆಂತಹ ಅದೃಷ್ಟ ಹೀನೆಯೆಂದು, ನನ್ನ ಮನಸ್ಸು ಕುದಿಯುತ್ತಿದೆ.

**ದಶರಥ**:—ಕೌಸಲ್ಯಾ, ಇದು ನಿನ್ನ ಅಪರಾಧವೇ ; ಈಶ್ವರ ಸಂಕಲ್ಪವಿದ್ದರೆ ಪುತ್ರರನ್ನು ಪಡೆಯುವುದು ಅತಿಶಯವೇ ; ಅಲ್ಲದೆ ಮಿಕ್ಕಿವರಿಗಾದರೆ ಹೊಟ್ಟೆಯಲ್ಲಿ ಹುಟ್ಟಿದವರು ಮಾತ್ರ ಮಕ್ಕಳು. ಮಹಾರಾಜ್ಞಿಯಾದ ನಿನಗೋ, ಸಾಕೇತಪುರಜನರೆಲ್ಲರೂ ಪುತ್ರ ಸಮಾನರಲ್ಲವೆ ?

**ಕೌಸಲ್ಯ**:—ಮಹಾರಾಜ, ನಿಮ್ಮೊಡನೆ ವಾದಿಸಲಾರೆ. ನನಗೂ, ಪ್ರಜಾವರ್ಗಕ್ಕೂ, ಮಾತಾಪುತ್ರ ಸಂಬಂಧವು ಧಾರ್ಮಿಕವಾದರೂ, ಹೊಟ್ಟೆಯಲ್ಲಿ ಹುಟ್ಟಿದ ತನ್ನ ಮಗುವಿನ ಲಾಲನೆಪಾಲನೆಗಳನ್ನು ಯಾವ ಯುವತಿಯು ಬೇಡವೆನ್ನುವಳು. ಪಾವನವಾದ ಈ ರಘುವಂಶಕ್ಕೆ, ವಂಶಾಂಕುರನಾದ ಪುತ್ರರತ್ನವನ್ನು ಕಾಣಿಕೆಯಾಗಿ ಅರ್ಪಿಸದ ನಾನೆಂತಹ ಭಾಗ್ಯಹೀನಳು.

**ದಶರಥ**:—ರಾಣೀ, ವೃಥಾ ಚಿಂತಿಸದಿರು. ಗುರುಗಳಾದ ವಶಿಷ್ಟರನ್ನು ಕರೆಸಿ, ಪುತ್ರಲಾಭಕ್ಕಾಗಿ ಯಾವ ಪೂಜಾದಿಗಳನ್ನು ಆಚರಿಸಬೇಕೆಂದು ತಿಳಿದು, ನಂತರ ಆ ರೀತಿ ಮಾಡೋಣ. ನನಗೂ, ರಘುವಂಶಕ್ಕೆ ನಾನೇ ಕೊನೆಯುವನೆಂಬ ಅಪಕೀರ್ತಿಬಾರದಂತೆ ನಡೆಯುವ ಆಸೆಯಿದೆ. ಇನ್ನಾದರೂ ನಿನ್ನ ಕಳವಳವನ್ನು ಬಿಡುವೆಯಾ ?

**ಕೌಸಲ್ಯ**:—ಅಪ್ಪಣೆ ಮಹಾರಾಜ.

**ಸುಮಂತ್ರ**:—(ಪ್ರವೇಶಿಸಿ) ಜಯವಾಗಲಿ ಮಹಾರಾಣಿಯವರಿಗೆ ; ವಿಜಯೀಭವ ಸಾರ್ವಭೌಮ.

**ದಶರಥ**:—ಕೌಸಲ್ಯ, ನೀನಿನ್ನು ಅಂತಃಪುರದಲ್ಲಿ ವಿಶ್ರಮಿಸಿಕೋ ಹೋಗು. (ಕೌಸಲ್ಯೆ ಹೊರಡುವಳು) — ಸುಮಂತ್ರ, ಬಂದ ಕಾರಣವೇನು ?

**ಸುಮಂತ್ರ**:—ಮಹಾರಾಜ, ತಾವೇ ನನಗೆ ಬರಬೇಕೆಂದು ಅಪ್ಪಣೆ ಮಾಡಿದುದು ಜ್ಞಾಪಕಕ್ಕೆ ಬರಲಿಲ್ಲವೇ ?

**ದಶರಥ**:—ನಾನು ಬರಹೇಳಿದ್ದೇನೆ! ಕಾರಣ, (ಯೋಚಿಸುವನು)

**ಸುಮಂತ್ರ**:—ದೇವಾ, ಮನಸ್ಸು ಇಷ್ಟು ಕಳವಳಿಸಲು ಕಾರಣವೇನು? ನನ್ನ ದೂರ್ತತನವನ್ನು ಮನ್ನಿಸಿ. ತಮ್ಮ ಮುಖಕಮಲವು ಬಾಡಿದೆ. ಸಭಾ ಮಂದಿರದಲ್ಲಿ ತಮಗಿದ್ದ ಉತ್ಸಾಹವು, ಇಲ್ಲಿ ಕಾಣಬರುತ್ತಿಲ್ಲ.

**ದಶರಥ**:—ಸುಮಂತ್ರಾ, ಎಷ್ಟು ರಾಜ್ಯ ವೈಭವಗಳಿದ್ದರೂ, ಮಕ್ಕಳಿಲ್ಲದ ಮನೋವ್ಯಥೆಯು ನನ್ನನ್ನು ಕೊರೆಯುತ್ತಿದೆ. ಇದೇ ವ್ಯಥೆಯಿಂದ ಬಾಡಿದ ಮುಖವುಳ್ಳ ನನ್ನ ಕೌಸಲ್ಯೆಯನ್ನು ನೋಡಿದರೆ— ಹಾ.... ಪುತ್ರಹೀನನಾದ ನಾನು ರಘುವಂಶ ಕಳಂಕನಲ್ಲವೇ!

**ಸುಮಂತ್ರ**:—ಮಹಾರಾಜ. ಅದಕ್ಕಿಷ್ಟು ಚಿಂತೆಯೇ. ಭಗವದನುಗ್ರಹ ದಿಂದ ತಾವೂ ಸುಪುತ್ರರನ್ನು ಪಡೆದೇ ಪಡೆಯುವಿರಿ. ಹಿಂದೆ ದಿಲೀಪ ಮಹಾರಾಜರು, ಗುರು ವಶಿಷ್ಟರ ಸಲಹೆಯಂತೆ, ಗೋಸೇವೆಮಾಡಿ, ರಘು ಮಹಾರಾಜರನ್ನು ಪಡೆಯಲಿಲ್ಲವೆ? ಈಗಲೂ ಗುರುದೇವರಲ್ಲಿ, ಈ ವಿಷಯವನ್ನು ಪರ್ಯಾಲೋಚಿಸಿ ಪುತ್ರ ಲಾಭಕ್ಕಾಗಿ ವಿಚಾರಮಾ ಡೋಣವಾಗಲಿ.

**ದಶರಥ**:—ಸುಮಂತ್ರಾ, ನನಗೆ ನಿರಾಶಾಮಯವಾದ ಈ ಅರಮನೆಯನ್ನು ನೋಡಿದರೆ ಮನಸ್ಸು ಕುದಿಯುತ್ತದೆ. ಬೇಗನೆ ಗುರುದೇವರನ್ನು ಕರೆಸುವ ಪ್ರಯತ್ನಮಾಡು. ಅವರು ಬರುವ ಮುನ್ನ ನಾನು ಸಹಾ ಒಂದೆರಡು ದಿನ ಬೇಟೆಯಲ್ಲಿ ಕಾಲ ಕಳೆಯಬೇಕೆಂದಿರುವೆನು. ಅದಕ್ಕೆ ತಕ್ಕ ಪ್ರಯತ್ನವನ್ನೂ ಮಾಡಿಸು.

**ಸುಮಂತ್ರ**:—ತಮ್ಮ ಚಿತ್ತ, ಈಗಲೇ ವಶಿಷ್ಠಾಶ್ರಮಕ್ಕೆ ಚಾರನನ್ನು ಕಳುಹಿಸುವೆನು. ನಾಳಿನ ಮುಂಜಾನೆಯಲ್ಲಿ ನಾವಿಬ್ಬರೂ ಮೃಗಯಾ ವಿಹಾರಕ್ಕೆ ಹೋಗಿ, ಮರುದಿನ ಅಯೋಧ್ಯೆಗೆ ಬರಬಹುದಷ್ಟೆ.

**ದಶರಥ**:—ನೀನೂ ಬರುತ್ತೀಯಾ! ಬಹಳ ಸಂತೋಷ.

**ಸುಮಂತ್ರ**:—ನಾಳೆ ಸೂರ್ಯ ಉದಯಕ್ಕೆ ಸರಿಯಾಗಿ ತಮ್ಮನ್ನು ಕಾಣು ವೆನು. ಅಪ್ಪಣೆಕೊಡಿ ಮಹಾರಾಜ. (ಹೊರಡುವನು)

ತೆರೆ ಬೀಳುವುದು.

## (ದೃಶ್ಯ: ೨ ಅರಣ್ಯ)

[ದಶರಥನೂ, ಸುಮಂತ್ರನೂ ಬೇಟೆಗೆ ಬಂದಿದ್ದಾರೆ. ಸೂರ್‍ಯನು ಮುಳುಗುವ ಸಮಯ]

**ಸುಮಂತ್ರ:**—ಮಹಾರಾಜ, ಸೂರ್‍ಯನು ಮುಳುಗುವ ಕಾಲವಾಯಿತು. ಇನ್ನು ನಾವು ಅಯೋಧ್ಯೆಯ ಕಡೆಗೆ ಹೊರಡೋಣವೇ.

**ದಶರಥ:**—ಸುಮಂತ್ರ, ಮನಸ್ಸಿನ ಬೇಸರವನ್ನು ಕಳೆಯಲು ಬೇಟೆಗೆ ಬಂದರೆ ಬೆಳಗಿನಿಂದ ಒಂದು ಮೃಗವೂ ಸಿಕ್ಕಲಿಲ್ಲ ಎಂತಹ ನಿರಾಶೆ.

**ಸುಮಂತ್ರ:**—ಸ್ವಾಮಿ, ಬೆಳಗಿನಿಂದ ಕಾಡನ್ನೆಲ್ಲಾ ಸುತ್ತಿ ಬಹಳ ದಣಿದಿದ್ದೀರಿ. ಅಲ್ಲದೆ ಈ ಕತ್ತಲೆಯಲ್ಲಿ ಬೇಟೆಯಾಡುವುದು ಅಪಾಯಕರವಲ್ಲವೇ ಯೋಚಿಸಿ.

**ದಶರಥ:**—ಇಲ್ಲ, ಸುಮಂತ್ರ. ಬೇಟೆಗೆ ಬಂದ ಮೇಲೆ ಯಾವ ಮೃಗವನ್ನೂ ಕೆಡಹದೆಹೋದಲ್ಲಿ, ಎಂತಹ ಮನೋರಥ ಭಂಗವಾಗುವುದು ಈಗ ಸಂಧ್ಯಾ ಸಮಯ ಯಾವುದಾದರೂ ಮೃಗವು ಜಲಪಾನಕ್ಕಾಗಿ ಯಾದರೂ ಬಂದೀತು. ಅದನ್ನು ಸಂಹರಿಸಿ ನಂತರ ಅಯೋಧ್ಯೆಗೆ ಹೊರಡೋಣ.

**ಸುಮಂತ್ರ:**—ರಾಜೇಂದ್ರ, ಬೇಟೆಗೆ ಬಂದವರು ಮೃಗ ಸಂಹಾರ ಮಾಡಲೇ ಬೇಕೆಂಬ ನಿಯಮವಿಲ್ಲ. ಬೇಟೆ ಸಿಕ್ಕಲಿಲ್ಲವೆಂಬ ಚಿಂತೆಯನ್ನು ಬಿಡಿ. ಹಿಂತಿರುಗೋಣ

**ದಶರಥ:**—ಸುಮಂತ್ರ, ನನ್ನ ಮನಸ್ಸಿಗೆ ಸಮಾಧಾನವಿಲ್ಲ. ಇನ್ನೊಂದು ಕ್ಷಣಕಾಲ ನೋಡೋಣ. ಅಷ್ಟರಲ್ಲಿ ಯಾವುದಾದರೂ ಮೃಗವು ಹೊರಗೆ ಬಂದೀತು. ಬಂದಲ್ಲಿ ನನ್ನ ಬಾಣವನ್ನು ಪ್ರಯೋಗಿಸುವೆನು

**ಸುಮಂತ್ರ:**—ಇಂದೇನು ಪ್ರತಿಜ್ಞೆ ಮಾಡಿರುವಿರಾ. ಮಹಾರಾಜ. ತಾವು ಬಹಳ ಬಳಲಿರುವಿರಿ ; ಸೈನಿಕರೂ ಶ್ರಮಪಟ್ಟಿದ್ದಾರೆ. ಆದ್ದರಿಂದ ಹೊರಡೋಣ.

**ದಶರಥ.**—ಹಾಗಾದರೆ ನೀನು ಸೈನ್ಯವನ್ನು ತೆಗೆದುಕೊಂಡು ಹೊರಡು ನಾನಿನ್ನು ಸ್ವಲ್ಪ ಕಾಲವಿದ್ದು ಬರುತ್ತೇನೆ

**ಸುಮಂತ್ರ**:—ಕ್ಷಮಿಸಿ, ಪ್ರಭೂ, ನಿಮ್ಮನ್ನು ಬಿಟ್ಟು ನಾವೆಲ್ಲರೂ ಹೊರಡಬಹುದೇ. ನಿಮ್ಮ ಜತೆಗೆ ನಾನೊರ್ಬನಿದ್ದು ಉಳಿದವರನ್ನು ಕಳುಹಿಸುವೆನು.

**ದಶರಥ**:—ಸುಮಂತ್ರ, ಅದು ಸರಿಯಾದ ಮಾರ್ಗ. ಅವರೆಲ್ಲರನ್ನೂ ಕಳುಹಿಸಿ ಬೇಗ ಬಾ (ಸುಮಂತ್ರ ಹೊರಡುವನು) — ಏನು ಈ ವಿಚಿತ್ರ, ನನಗೇಕೋ ಮನಸ್ಸು ಭಾರವಾಗಿದೆ. ಸುಮಂತ್ರನು ಹೇಳಿದಂತೆ ಪುರಕ್ಕೆ ಹೊರಡುವುದೇ ಉತ್ತಮವೇ? ಇಲ್ಲ - ಇಲ್ಲ. ಇನ್ನೊಂದು ಕ್ಷಣದಲ್ಲಿ ಯಾವುದಾದರೂ ಮೃಗವನ್ನು ಕೊಂದು ನಂತರ ಹೊರಡುವುದರಿಂದ ಭಾವಕನೇನು.

**ಸುಮಂತ್ರ**:—(ಪ್ರವೇಶಿಸಿ) ಮಹಾರಾಜ ಎಲ್ಲರೂ ಹೊರಟರು. ತಾವು ಈ ಮಾರ್ಗವಾಗಿ ದಯಮಾಡಿಸಿ, ಈ ವೃಕ್ಷದ ಕೆಳಗೆ ಸ್ವಲ್ಪ ವಿಶ್ರಮಿಸಬಹುದು.

**ದಶರಥ**:—ಸುಮಂತ್ರ, ನನಗೆ ಆಯಾಸವಿಲ್ಲ. ಆದರೆ...............ಈ ದಿನ ಏನೋ ಒಂದು ಬಗೆಯ ಕಾತುರವಿದೆ. ಕಳವಳವಿದೆ. ಮನಸ್ಸು ಸ್ಥಿರವಿಲ್ಲ. ಹಾಗೆಯೇ ನಡೆಯೋಣ ಬಾ

**ಸುಮಂತ್ರ**:—ಈ ಕತ್ತಲೆಯಲ್ಲಿ, ಈ ನಿರ್ಜನ ಪ್ರದೇಶದಲ್ಲಿ ನಡೆಯುವುದು ನನಗಿಷ್ಟವಿಲ್ಲ ಆದರೆ ತಮ್ಮ ಇಷ್ಟದಂತೆ ಹೋಗೋಣ ಆ ಬಿಲ್ಲು ಬಾಣಗಳನ್ನಾದರೂ ಇತ್ತ ಕೊಡಿ. ನಾನು ತರುವೆನು.
(ಎಂದು ಧನುರ್ಬಾಣಗಳನ್ನು ತೆಗೆದುಕೊಳ್ಳುವನು)

**ದಶರಥ**:—ಸುಮಂತ್ರಾ, ಆ ನದಿಯ ದಡಕ್ಕಾದರೂ ಹೋಗೋಣ. ನೀರಿಗಾಗಿ ಬಂದ ಯಾವ ಮೃಗವಾದರೂ ನಮಗೆ ಸಿಕ್ಕಬಹುದು. (ನದಿಯಲ್ಲಿ ಗುಳುಗುಳು ಶಬ್ದ) ಅಗೋ ಶಬ್ದ! ಯಾವುದೋ ಮೃಗವು ನೀರಿಗೆ ಬಂದಿದೆ (ಆಲಿಸಿ ಕೇಳಿ) ಕೇಳು ಕೇಳು ಆನೆಯು ನೀರು ಕುಡಿಯುವ ಶಬ್ದ. ಈಗ ನನ್ನ "ಶಬ್ಧವೇದಿ"ಯ ಸಹಾಯದಿಂದ ಆ ಮೃಗವನ್ನು ಕೊಲ್ಲುವೆನು. ಸುಮಂತ್ರಾ ಎಲ್ಲಿ ನನ್ನ ಧನುಸ್ಸು [ಎಂದು ಧನುಸ್ಸನ್ನು ತೆಗೆದುಕೊಂಡು ಬಾಣ ಪ್ರಯೋಗ ಮಾಡುವನು) — ["ಅಯ್ಯೋ" ಎಂಬ ಆರ್ತನಾದ ಕೇಳುವುದು] (ನಾರಿ

ಯಿಂದ) ಇದೇನು ವಿಚಿತ್ರ! ಮಾನವನ ಆಕ್ರಂದನ ಧ್ವನಿ. ಸುಮಂತ್ರ ಬೇಗ ನಡೆ ಆ ಸ್ಥಳಕ್ಕೆ ಹೋಗಿ ಪರೀಕ್ಷಿಸೋಣ. (ಹೊರಡುವರು)

## [ದೃಶ್ಯ ೩. ನದೀ ತೀರ]

[ಎದೆಯಿಂದ ಇರಿಪು ಬೆನ್ನಿನಿಂದ ಹೊರಟ ಬಾಣದ ಪೆಟ್ಟಿನಿಂದ ಕೆಳಗೆ ಬಿದ್ದ ಮುನಿ ಕುಮಾರ ತಾಂಡವನು ನರಳುತ್ತಿರುವನು]

**ತಾಂಡವ:**—ಅಯ್ಯೋ ವಿಧಿಯೇ! ನೀರಿಗಾಗಿ ಬಂದ ನನಗೆ ಮರಣವ ನ್ನಿಟ್ಟೆಯಾ! ಸಾವಿಗೆ ಹೆದರುವುದಿಲ್ಲ; ಹುಟ್ಟಿದವರು ಸಾಯಲೇ ಬೇಕು. ಆದರೆ— —ಆದರೆ ನನ್ನ ವೃದ್ಧ ಮಾತಾಪಿತರ ಗತಿ ಯೇನು ? ಕಣ್ಣಿಲ್ಲದವರು-ಕೈ ಗೋಲಿನಂತಿದ್ದ ನನ್ನನ್ನೂ ಕಳೆದು ಕೊಂಡರೆ ಅವರ ಗತಿಯೇನು-ಅಯ್ಯೋ! ಬಾಯಾರಿಕೆಯಿಂದ ಬಳ ಲಿದ್ದ ಅವರಿಗೆ ಜಲವನ್ನು ತರಲು ಬಂದೆ. ಅವರ ಆಯಾಸವನ್ನು ಪರಿಹರಿಸುವ ಭಾಗ್ಯವೂ ನನಗಿಲ್ಲವಾಯಿತೆ!-ಈ ನಿರ್ಜನ ಪ್ರದೇಶ ದಲ್ಲಿ ನನ್ನನ್ನು ಕೊಲ್ಲಬೇಕಾದರೆ-ಇದು ವಿಧಿಯ ಕೃತ್ಯವೇ ಇರಬೇ ಕಲ್ಲದೆ-ನಿರಪರಾಧಿಯಾದ ನನ್ನ ಮೇಲೆ ಬಾಣ ಪ್ರಯೋಗವನ್ನು ಯಾರು ಮಾಡಬೇಕು-ಅಬ್ಬಾ-ಈ ನೋವನ್ನು ತಾಳಲಾರೆ. ಈ ಬಾಣವನ್ನು ನನ್ನ ದೇಹದಿಂದ ತೆಗೆದರೆ ಪ್ರಾಣಬಿಡಬಹುದು. ಅಷ್ಟು ಉಪಕಾರ ಮಾಡುವವರು ಯಾರು ಶ್ರೀ ಹರಿ! ನನ್ನ ಮಾತಾ ಪಿತರಿಗೆ ನೀನಲ್ಲದೆ ಬೇರೆ ಗತಿಯಿಲ್ಲ. ನನ್ನ ಕಷ್ಟವನ್ನು ಪರಿ ಹರಿಸು; ನಿನ್ನ ಪಾದದಲ್ಲಿ ಆಶ್ರಯ ಕೊಡು. ಅಯ್ಯೋ! ನೋವು, ನೋವು.

(ಸುಮಂತ್ರ ದಶರಥರು ಬರುವರು)

**ದಶರಥ:**—ಎಂತಹ ಭೀಕರ ದೃಶ್ಯ !

**ಸುಮಂತ್ರ:**—(ಮುಂದೆ ಬಂದು) ಮಹಾರಾಜ, ಎಂತಹ ಅಪಘಾತವಿದು! ಮನುಷ್ಯ-ಆಗರಲ್ಲಿಯೂ ಮುನಿ ಕುಮಾರನಂತಿದೆ. ಬಾಣವು ಎದೆ ಯನ್ನು ಸೀಳಿದೆ.

**ದಶರಥ:**—(ತಾಂಡವನ ಪಾದವನ್ನು ಹಿಡಿದು) ಅಯ್ಯೋ ನಾನೆಂತಹ ಪಾಪಿ ಮುನಿ ಕುಮಾರ, ಈ ಪಾಪಿಯನ್ನು ಮನ್ನಿಸು.

**ತಾಂಡವ:**—ಅಯ್ಯಾ, ನೀನು ಯಾರು. ಈ ಬಾಣವನ್ನು ತೆಗೆದರೆ ನನಗೆ ಮಹದುಪಕಾರವಾಗುತ್ತದೆ. ಈ ಭಾದೆಯಿಂದ ತಪ್ಪಿಸಿ ನನ್ನನ್ನು ರಕ್ಷಿಸು.

**ದಶರಥ:**—ಕುಮಾರ, ಆನೆಯೆಂಬ ಭ್ರಾಂತಿಯಿಂದ ನಿನ್ನನ್ನು ಸಂಹರಿಸಿದ ಕಡುಪಾಪಿ ನಾನು-ದಶರಥನೆಂದು ಕರೆಯುವರು ನಿನ್ನನ್ನು ಕೊಂದು ಬ್ರಂಹ ಹತ್ಯಾ ಪಾತಕಿಯಾದ ನನ್ನ ಜನ್ಮಕ್ಕೆ ಧಿಕ್ಕಾರ ವಿರಲಿ.

**ತಾಂಡವ:**—ಮಹಾರಾಜ, ದುಃಖಿಸಬೇಡ. ಆಗಬೇಕಾದುದು ಆಯಿತು. ಲೋಕದಲ್ಲಿ ಕೊಲ್ಲುವರಾರು, ಸಾಯುವರಾರು, ಎಲ್ಲವು ವಿಧಿನಿಯಮ. ನಮ್ಮಗಳ ಪ್ರಾರಬ್ಧ ಕರ್ಮವೇ ಅನಿರೀಕ್ಷಿತವಾಗಿ ಶುಭಾಶುಭಗಳನ್ನು ಒದಗಿಸುವುದು-ಮೇಲಾಗಿ ನಾನು ಬ್ರಾಂಹಣನಲ್ಲ-ಆದ್ದರಿಂದ ನಿನಗೆ ಬ್ರಂಹ ಹತ್ಯವೆಂದಿಗೂ ಇಲ್ಲ ಆದರೆ ನನ್ನದೊಂದು ಕೋರಿಕೆ ಇದೆ-ನಡೆಸಿಕೊಡುವೆಯಾ ?

**ದಶರಥ:**—ಮುನಿ ಕುಮಾರ, ಎಂತಹ ಸಹನೆ ನಿನಗೆ. ಜ್ಞಾನದಿಂದ ಬ್ರಾಂಹಣ ಉತ್ತಮನಿಗೂ ಮಿಗಿಲೆನಿಸಿದ್ದೀಯೋ ಇಂತಹ ನಿನ್ನ ಪಾಲಿಗೆ ನಾನೇ ಮೃತ್ಯುವಾದೆನಲ್ಲಾ ! ಅಯ್ಯೋ ದೈವವೇ, ನನಗೇಕೆ ಬೇಟೆಯ ಭ್ರಾಂತಿಯನ್ನು ತಂದೆ.

**ತಾಂಡವ:**—ದಶರಥ, ವ್ಯಥೆಪಡಬೇಡ. ಮರಣಕ್ಕೆ ನಾನು ಹೆದರುವುದಿಲ್ಲ. ಆ ದೂರದ ಮರದ ಕೆಳಗೆ ನನ್ನ ವೃದ್ಧ ಮಾತಾಪಿತರಿರುವರು. ಕಣ್ಣಿಲ್ಲದವರು-ಬಾಯಾರಿಕೆಯಿಂದ ಬಳಲಿದ್ದಾರೆ. ಅವರ ದಾಹ ತಾಪವನ್ನು ಪರಿಹರಿಸುವ ಲಭ್ಯವಿಲ್ಲ. ರಾಜ, ನೀನು ಈ ನೀರಿನ ಪಾತ್ರವನ್ನು ಅವರಿಗೆ ಕೊಡುವೆಯಾ, ನಿರ್ಗತಿಕರಾದ ಅವರಿಗೆ ನಿನ್ನ ಹೊರತು ಮತ್ತಾರು ಗತಿಯಿಲ್ಲ ಅವರನ್ನು ರಕ್ಷಿಸುವೆನೆಂದು ಮಾತು ಕೊಟ್ಟರೆ ಸುಖವಾಗಿ ಸಾಯುವೆನು. ಇದೇ ನನ್ನ ಕಡೆಯ ಪ್ರಾರ್ಥನೆ. ಮಹಾರಾಜ ನಡೆಸಿಕೊಡುವೆಯಾ.

**ದಶರಥ:**—ಅಗತ್ಯವಾಗಲಿ. ನಿನ್ನಾಣತಿಯಂತೆ ಶಿರಸಾವಹಿಸಿ ನಡೆಯುವೆನು. ಅಯ್ಯೋ ನಿನ್ನನ್ನು ಉಳಿಸುವ ಉಪಾಯವಾವುದು.

**ತಾಂಡವ:—**ದಶರಥ, ನನ್ನ ಚಿಂತೆಯನ್ನು ಬಿಡು. ನನ್ನ ತಂದೆ ತಾಯಿಗಳನ್ನು ರಕ್ಷಿಸುವೆನೆಂದು ಹೇಳಿದ ಮೇಲೆ, ನನಗೆ ನಿಶ್ಚಿಂತೆಯಾಯಿತು. ಅಬ್ಬಾ, ನೋವು ತಾಳಲಾರೆ. ನನ್ನ ದೇಹದಿಂದ ಈ ಬಾಣವನ್ನು ತೆಗೆದರೆ ನಾನು ಭಾಧೆಯಿಲ್ಲದೆ ಸಾಯುವೆನು. ಅವಶ್ಯ (ನರಳುವನು)

**ದಶರಥ:—**ಸುಮಂತ್ರ, ಏನು ಮಾಡಲಿ. ಈ ಬಾಣವನ್ನು ಕೀಳಲು ನನ್ನ ಕೈ ನಡಗುತ್ತಿದೆ. ಪಾಪಿಯಾದ ನಾನು ಇಂದೇಕೆ ಬೇಟೆಗಾಗಿ ಇಷ್ಟು ಹಟಮಾಡಿದೆ.

**ತಾಂಡವ:—**ಮಹಾರಾಜ, ಚಿಂತಿಸಬೇಡ. ನನ್ನ ಭಾದೆಯನ್ನು ಪರಿಹರಿಸುವುದು ನಿನ್ನ ಕರ್ತವ್ಯವಲ್ಲವೇ. ಅಂಜದೆ, ಈ ಬಾಣವನ್ನು ತೆಗೆ (ದಶರಥನು ಬಾಣವನ್ನು ಕೀಳಲು ರಕ್ತ ಪ್ರವಾಹ ಹರಿಯುವುದು. ಮುನಿ ಕುಮಾರನ ಸಂಕಟ ಹೆಚ್ಚುವುದು) -ಅಬ್ಬಾ! ಈಗ ಭಾದೆ ಪರಿಹಾರವಾಯಿತು-ದಶರಥಾ ನನ್ನ ಮಾತಾಪಿತರನ್ನು ರಕ್ಷಿಸುವೆಯಾ,-ಮರೆಯದಿರು- ಇನ್ನು ನಾನು ಬರುವೆನು-ನನ್ನ ಕೊನೆಯಾಶೆಯನ್ನು ಮಾತ್ರ ನಡೆಸದಿರಬೇಡ. ಶ್ರೀ-ಹ-ರಿ. (ಸಾಯುವನು)

**ಸುಮಂತ್ರ:—**ನೊಂದ ಜೀವವು ನಂದಿ ಹೋಯಿತು-ಮಹಾರಾಜ, ಇನ್ನು ಗತಿಸಿದವನ ಅಂತ್ಯ ಕೋರಿಕೆಯನ್ನು ನೆರವೇರಿಸಬೇಕಾದದು ನಮ್ಮ ಕರ್ತವ್ಯವಲ್ಲವೇ.

**ದಶರಥ:—**ಸುಮಂತ್ರ, ಪುತ್ರಶೋಕದಿಂದ ವ್ಯೆ ಮರೆಯುವ ಆ ದಂಪತಿಗಳನ್ನು ಹೇಗೆ ಮಾತನಾಡಿಸಲಿ; ನಿಮ್ಮ ಮಗನನ್ನು ಕೊಂದೆನೆಂದು ಯಾವ ಬಾಯಿಂದ ಅವರಿಗೆ ಈ ದುಃಖವನ್ನು ತಿಳಿಸಲಿ.

**ಸುಮಂತ್ರ:—**ಮಹಾರಾಜ, ತಾವು ಈಗ ಧೈರ್ಯಗೆಡಬಾರದು ಆ ಪಾತ್ರೆಯನ್ನು ತೆಗೆದುಕೊಳ್ಳಿರಿ. ಬಾಯಾರಿಕೆಯಿಂದ ಬಳಲಿರುವ ಆ ದಂಪತಿಗಳ ದಾಹ ಶಮನ ಮಾಡಿ, ನಂತರ ಅವರಿಗೆ ಈ ವಿಷಯವನ್ನು ತಿಳಿಸಿ ಸಂತೈಸಬೇಕು. ತಾವು ನಡೆಯಿರಿ. ನಾನೀತನ ದೇಹವನ್ನು ಸಂಸ್ಕರಿಸಿ ಬರುತ್ತೇನೆ.

(ತೆರೆ ಬೀಳುವುದು—ಹೊರಡುವರು)

---

## [ದೃಶ್ಯ ೪. ಅರಣ್ಯದ ಮತ್ತೊಂದುಭಾಗ]

[ವೃದ್ಧರೂ, ಕುರುಡರೂ ಆದ ತಾಪಸ, ತಾಪಸಿಯರು, ಕುಳಿತಿದ್ದಾರೆ. ನೀರಿಗಾಗಿ ಹೋದ ಮಗನ ಬರುವಿಕೆಯನ್ನು ನಿರೀಕ್ಷಿಸುತ್ತಿದ್ದಾರೆ]

**ತಾಪಸ:**—ಗೌತಮೀ, ಸುಕುಮಾರನು ನಮಗಾಗಿ ಎಷ್ಟು ಶ್ರಮ ಪಡುತ್ತಾನೆ. ವಿದರ್ಭವೆಲ್ಲಿ, ಕೋಸಲವೆಲ್ಲಿ, ಎಷ್ಟು ದೂರದಿಂದ ನಮ್ಮನ್ನು ಕಾವಡಿಯಲ್ಲಿ ಹೊತ್ತು ತಂದಿದ್ದಾನೆ. ಭಗವಂತನು ಇಂತಹ ಮಗನನ್ನು ಕರುಣಿಸದಿದ್ದರೆ ನಮ್ಮ ಗತಿಯೇನು. ದೇವಾ, ಈ ಬಾಲಕನಿಗೆ ನೀನು ಒಲಿಯಬೇಕು.

**ತಾಪಸಿ:**—ಆರ್ಯ, ನನಗೇಕೋ ಭಯವಾಗುತ್ತಿದೆ. ಹೃದಯವು ತಳಮಳಿಸುತ್ತಿದೆ ಕಾರಣವೇನೋ ಕಾಣೆನಲ್ಲಾ!

**ತಾಪಸ:**—ಹೆದರಬೇಡ. ಬಾಯಾರಿಕೆಯ ಶ್ರಮದಿಂದ ಹೀಗಾಗಿರಬಹುದು. ಸ್ವಲ್ಪ ಸೈರಿಸು. ತಾಂಡವನು ಬೇಗನೆ ನೀರನ್ನು ತರುವನು.

**ತಾಪಸಿ:**—ಕಣ್ಣಿಲ್ಲದ ನಮಗಾಗಿ ಇಷ್ಟು ಬಳಲಿದ ಮಗನು, ನೀರಿಗಾಗಿ ಇನ್ನೆಲ್ಲಿ ಅಲೆಯುತ್ತಿರುವನೋ! ನಿರ್ಜನವಾದ ಈ ಅಡವಿಯಲ್ಲಿ ಅವನಿಗೆ ನೀರು ಸಿಕ್ಕಿತೋ ಇಲ್ಲವೋ! ನನಗಾದರೋ ಹೊಟ್ಟೆಯಲ್ಲಿ ಬೆಂಕಿ ಹಾಕಿದಂತೆ ಸಂಕಟವಾಗುತ್ತಿದೆ. ಆರ್ಯ, ಏಕಿಷ್ಟು ವೇಳೆಯಾದರೂ ತಾಂಡವನು ಬರಲಿಲ್ಲ. ಪರಮಾತ್ಮ ನನ್ನ ಮಗನನ್ನು ರಕ್ಷಿಸು.

**ತಾಪಸ:**—ಗೌತಮೀ ಕಾತುರ ಪಡುವೇ ಏಕೆ. ನೀರಿಗಾಗಿ ಹೋದ ಮಗನು ನೀರನ್ನು ಪಡೆಯದೆಯೇ ಬರುವನೇ! ಸ್ವಲ್ಪ ಸೈರಿಸು. ಅಷ್ಟರೊಳಗೆ ನೀರನ್ನು ತೆಗೆದುಕೊಂಡು ಹಿಂತಿರುಗುವನು.

**ತಾಪಸಿ:**—ಇಲ್ಲ ಆರ್ಯ, ನನ್ನ ಹೃದಯದಲ್ಲಿ ಪ್ರಳಯ ಜ್ವಾಲೆಯ ಉರಿ ಎದ್ದಿದೆ. ಜಗತ್ತು ಶೂನ್ಯವಾದಂತಿದೆ. ಏಕೋ ತಿಳಿಯದು. ಸೈರಿಸಲಾರೆ. ಓರ್ವನನ್ನೇ ಏಕೆ ಕಳುಹಿಸಿದೆನೋ ಕಾಣೆನಲ್ಲಾ. (ಹೆಜ್ಜೆಯ ಸದ್ದು)

**ತಾಪಸ:**—ಅಗೋ ಕಾಲಿನ ಸದ್ದು ಕೇಳುತ್ತಿದೆ. ಕುಮಾರನೇ ಬರುವಂತಿದೆ. ತಾಂಡವಾ ಬಂದೆಯಾ, ನೀರನ್ನು ತಂದೆಯಾ ?

**ತಾಪಸಿ:**—ಮಗೂ, ತಾಂಡವ ಬಂದೆಯಾ, ಏಕಿಷ್ಟು ವೇಳೆಯಾಯಿತು. ಅಪ್ಪ, ನಿಮ್ಮ ತಂದೆಗೆ ಮೊದಲು ದಾಹ ಪರಿಹರಿಸು.

**ತಾಪಸ:**—ಎಲ್ಲಿ ಮಗು ನೀರು. ಏಕೆ ಮಾತನಾಡುವುದಿಲ್ಲ ತಾಂಡವಾ-ತಾಂಡವಾ.

**ದಶರಥ:**—ಆರ್ಯ, ನೀರನ್ನು ತೆಗೆದುಕೊಳ್ಳಿರಿ.

**ತಾಪಸ:**—ಯಾರು, ಯಾರಪ್ಪಾ ನೀನು ? ಬೇರೆ ಧ್ವನಿಯಾಗಿರುವುದಲ್ಲಾ!

**ತಾಪಸಿ:**—ತಾಂಡವನೆಲ್ಲಿ ಹೇಳಪ್ಪಾ.

**ದಶರಥ:**—ನಾನೊರ್ವ ಯಾತ್ರಿಕ. ನಿಮ್ಮ ಕುಮಾರನೇ ಈ ನೀರನ್ನು ಕಳುಹಿಸಿದ್ದಾನೆ. ಪಾನ ಮಾಡಿ.

**ತಾಪಸ:**—ಅವನೆಲ್ಲಿ, ನನ್ನ ಕುಮಾರನೆಲ್ಲಿ ?

**ತಾಪಸಿ:**—ನನ್ನ ಮಗನೇಕೆ ಬರಲಿಲ್ಲ. ಅವನೇನು ಮಾಡುತ್ತಿದ್ದಾನೆ ?

**ದಶರಥ:**—ನಿಮ್ಮ ಮಗನು ಕೆಲವು ಫಲಗಳನ್ನು ಆರಿಸುತ್ತಿರುವನು. ಅದುವರಿಗೆ ನೀವು ದಾಹ ಶ್ರಮವನ್ನು ತಡೆಯಲು ಅಸಾಧ್ಯವೆಂದು, ನನ್ನೊಡನೆ ಈ ಜಲವನ್ನು ಕಳುಹಿಸಿರುವನು.

**ತಾಪಸ:**—ಅಯ್ಯಾ, ನಿನ್ನ ಮಾತಿನಲ್ಲಿ ಏನೋ ಸಂದೇಹ ಬರುತ್ತಿದೆ. ನಿನ್ನ ಧ್ವನಿ ಏಕೆ ನಡಗುತ್ತಿದೆ. ಸತ್ಯವನ್ನು ಹೇಳು. ನನ್ನ ಮಗನೆಲ್ಲಿ.

**ತಾಪಸಿ:**—ಅವನು ಬರುವವರೆಗೂ ನಾನು ಜಲಪಾನ ಮಾಡುವುದಿಲ್ಲ. ಅವನು ಎಲ್ಲಿರುವನು ಜೊತೆಯಲ್ಲಿ ಯಾರಿರುವರು ?

**ದಶರಥ:**—ಮಹಾತ್ಮರೇ, ನನ್ನ ಕಡೆಯವರೊಡನೆ ಆತನಿದ್ದಾನೆ. ಇನ್ನೇನು ಬರುತ್ತಾನೆ. ನೀವು ಪಾನ ಮಾಡಿ.

**ತಾಪಸ:**—ಇಲ್ಲ. ಅವನನ್ನು ಕರೆದುಕೊಂಡು ಬಾ. ಅಲ್ಲಿನವರೆಗೂ ನಾವು ಜಲಪಾನ ಮಾಡುವುದಿಲ್ಲ. ಹೋಗು-ನನ್ನ ಕುಮಾರನನ್ನು ಕರೆತಂದು ತೋರಿಸು.

**ದಶರಥ:**—(ದುಃಖದಿಂದ) ಋಷಿವರ್ಯರೇ. ನಿಮ್ಮ ಮಗನನ್ನು ಎಲ್ಲಿಂದ ಕರೆತರಲಿ, ಆತನು ಹಿಂತಿರುಗಿ ಬಾರದ ಬಳಿಗೆ ಹೋಗಿರುವಾಗ, ಮರಳಿ ಕರೆತರುವ ಬಗೆ ಹೇಗೆ.

**ತಾಪಸಿ**:—ಹಾ !!!- ಅಯ್ಯೋ ತಾಂಡವಾ-ಕು-ಮಾ-ರಾ. (ಸಾಯುವಳು)

**ದಶರಥ**:—ಅಮ್ಮಾ ಸಂತೈಸಿಕೊಳ್ಳಿ-ಸಂತೈಸಿಕೊಳ್ಳಿ-ಅಯ್ಯೋ ಈಕೆಯು ಪುತ್ರವಿಯೋಗದಿಂದ ಮೃತಿ ಹೊಂದಿದಳೇ! ಪಾಪಿಯಾದ ನನಗೆ ಈ ಸ್ತ್ರೀ ಹತ್ಯವೂ ಒದಗಿತಲ್ಲಾ!

**ತಾಪಸ**:—ಗೌತಮಿ, ಗೌತಮಿ,- ಎಲಾ ಪಾಪಿ. ನನ್ನ ಪತ್ನಿಯ ಮರಣ, ನನ್ನ ಮಗನ ಮರಣ-ಇದಕ್ಕೆ ಕಾರಣ. ಹೇಳು. ನನ್ನ ಮಗನು ಸಾಯಲು ಕಾರಣವೇನು.

**ದಶರಥ**:—ಮಹಾತ್ಮ, ಅಯೋಧ್ಯೆಯ ಅರಸನಾದ ನನ್ನನ್ನು ದಶರಥ ನೆನ್ನುವರು. ಭೇಟೆಗಾಗಿ ಬಂದ ನಾನು, ಆನೆಯೆಂಬ ಭ್ರಾಂತಿಯಿಂದ ಹೊಡೆದ ಬಾಣವು ನಿಮ್ಮ ಮಗನನ್ನು ಸಂಹರಿಸಿತು. ಆತನ ಅಂತ್ಯ ಕೋರಿಕೆಯಂತೆ, ಈ ಜಲವನ್ನು ತಮಗಾಗಿ ತಂದೆದು. ಈ ಪಾಪಿಯ ಅಪರಾಧವನ್ನು ಕ್ಷಮಿಸಿ.

**ತಾಪಸ**:—ಕ್ಷಮೆ-ಪುತ್ರ ಶೋಕವನ್ನುಂಟುಮಾಡಿ, ನಿರ್ಗತಿಕರಾದ ನಮ್ಮನ್ನು ಜೀವ ಶ್ರವಗಳಾಗಿ ಮಾಡಿದ ನಿನಗೆ ಕ್ಷಮೆ!

**ದಶರಥ**:—ಮುನಿವರ, ಅಕಸ್ಮಿಕವಾಗಿ ನಡೆದ ಈ ಅಪರಾಧಕ್ಕೆ ನೀವು ಇಷ್ಟು ಕ್ರೋಧ ತಾಳಿದರೆ, ನನ್ನ ಗತಿಯೇನು. ನಿಮ್ಮ ರಕ್ಷಣಾ ಭಾರವು ನನ್ನದು. ಗತಿಸಿದ ನಿಮ್ಮ ತಾಂಡವನೇ ನಾನೆಂದು ಭಾವಿಸಿ ನನ್ನನ್ನು ಕ್ಷಮಿಸಿ.

**ತಾಪಸ**:—ಛೀ ಮೂರ್ಖ, ನನ್ನ ಕುಮಾರನಿಲ್ಲದ ಮೇಲೆ ನಾನು ಬದುಕುವನೋ, ನೀನು ರಕ್ಷಿಸುವನೋ ? ಎಲಾ ಪಾಪಿ ನಿನಗೆ ಕ್ಷಮೆ-ಪಾವನೆಯಾದ ಗಂಗೆಯನ್ನು ಸಹಾ, ತುಳಿದರೆ ಕೆಸರೇಳುವುದು. ಹಾಗಿರುವಲ್ಲಿ, ಅಪರಾಧಿಯಾಗಿ ನಿನಗೆ ಕ್ಷಮೆ-ಕಣ್ಣಿಲ್ಲದ ನಮಗೆ ಕೈ ಗೋಲಿನಂತಿದ್ದ ಮಗನನ್ನು ಸಂಹರಿಸಿದ ನಿನಗೆ ಕ್ಷಮೆ-ಕ್ಷಮೆಯಲ್ಲ-ಶಾಪ!! ನನ್ನ ಮರಣ ಕಾಲದಲ್ಲಿ, ನನ್ನ ಪುತ್ರವಿಯೋಗಕ್ಕೆ ಕಾರಣನಾದ, ನಿನಗೂ ಪುತ್ರವಿಯೋಗ ದುಃಖದಿಂದ ಮರಣ ಬರಲಿ-ಹಾ ಗೌತಮಿ, ಕುಮಾರಾ-ತಾಂ-ಡ-ವಾ. (ಸಾಯುವನು)

[ದಶರಥನು ಸ್ತಬ್ಧನಾಗಿ ನಿಲ್ಲುವನು. ಸುಮಂತ್ರ ಪ್ರವೇಶಿಸಿ]

**ಸುಮಂತ್ರ**:—ಮಹಾರಾಜ-ಮಹಾರಾಜ!

**ದಶರಥ**:—ಸುಮಂತ್ರ, ಸಾಕು. ಸಾಕೇತ ರತ್ನ ಸಿಂಹಾಸನಕ್ಕೆ ಇಂತಹ ಕಳಂಕ ತಂದ ನನ್ನನ್ನು ಮಹಾರಾಜನೆಂದು ಕರೆಯಬೇಡ. ನಾನು ಇನ್ನು ಪುರ ಪ್ರವೇಶ ಮಾಡುವುದಿಲ್ಲ. ನೀನು ಹೊರಡು.

**ಸುಮಂತ್ರ**:—ಸ್ವಾಮಿ, ಏನು ಈ ಭ್ರಾಂತಿ. ಅನಿರೀಕ್ಷಿತವಾಗಿ ಒದಗಿದ ಈ ಅಪರಾಧಕ್ಕೆ ತಾವು ಕಾರಣರೇ, ಇಲ್ಲ-ಇದೆಲ್ಲ ದೈವಲೀಲೆಯಲ್ಲವೇ ನೀವು ಬಾರದಿದ್ದರೆ ಅನಾಥರಾದ ಪ್ರಜಾವರ್ಗದ ಗತಿಯೇನು.

**ದಶರಥ**:—ಮುನಿ ಹತ್ಯ, ಸ್ತ್ರೀ ಹತ್ಯಾದಿ ಪಾತಕಗಳನ್ನು ಮಾಡಿದ ನಾನು, ಪ್ರಜಾವರ್ಗವನ್ನು ರಕ್ಷಿಸ ಬಲ್ಲೆನೇ ? ಶಾಪ ಗ್ರಸ್ತನಾದ ನಾನು, ಈ ಕೆಟ್ಟ ಮುಖವನ್ನು ಕೌಸಲ್ಯಾದಿ ರಾಣಿಯರಿಗೆ ಹೇಗೆ ತೋರಿಸಲಿ!

**ಸುಮಂತ್ರ**:—ಮುನಿ ಹತ್ಯ-ಸ್ತ್ರೀ ಹತ್ಯ-ಶಾಪ.-ಶಾಪವಾವುದು ಮಹಾರಾಜ ?

**ದಶರಥ**:—ಸುಮಂತ್ರ ಪುತ್ರ ಶೋಕ ಭರದಿಂದ ಆ ಮುನಿಯು ನನ್ನನ್ನು ಶಪಿಸಿದನು.

**ಸುಮಂತ್ರ**:—ಏನೆಂದು! ನಿರಪರಾಧಿಗಳೆಂದು ತಿಳಿದೂ ಶಪಿಸಿದನೆ! ಮುನಿ ಕುಮಾರನು ನಿಮ್ಮನ್ನು ಕ್ಷಮಿಸಿದಂತೆ, ಆತನ ಪಿತನು ಕ್ಷಮಿಸಲಿಲ್ಲವೇ?

**ದಶರಥ**:—ಇಲ್ಲ, ಪುತ್ರ ವಿಯೋಗ ದುಃಖದಿಂದ ನನಗೂ ಮರಣ ಬರಲೆಂದು ಶಪಿಸಿದನು. ಹಿಂದಿನ ಜನ್ಮದಲ್ಲಿ ಯಾವ ಮಕ್ಕಳನ್ನು ತಾಯಿ ತಂದೆಯರಿಂದ ಅಗಲಿಸಿದ್ದೆನೋ, ಆ ಪಾಪವೇ ಕಾಡುತ್ತಿತ್ತು; ಇನ್ನಿದರ ಜೊತೆಗೆ ಈ ಶಾಪ ಬೇರೆ ಸೇರಿದ ಮೇಲೆ ನಾನು ಅಯೋಧ್ಯೆಗೆ ಯಾವ ಮುಖವೆತ್ತಿ ಹಿಂತಿರುಗಲಿ.

**ಸುಮಂತ್ರ**:—(ಸಂಭ್ರಮದಿಂದ ಮಹಾರಾಜ, ಇದು ದೈವಲೀಲೆ. ತಾವು ಸಾವಧಾನವಾಗಿ ಯೋಚಿಸಿ. ಆ ಮುನಿಯು ನಿರಪರಾಧಿಗಳಾದ ನಿಮಗಿತ್ತ ಶಾಪವೂ ಅನುಗ್ರಹವೇ ಆಗಿದೆ.

**ದಶರಥ**:—ಅನುಗ್ರಹ-ಸುಮಂತ್ರ ಏನು ಮಾತನಾಡುತ್ತಿರುವೆ. ಪುತ್ರ ವಿಯೋಗ ದುಃಖವು ಅನುಗ್ರಹವೇ ?

**ಸುಮಂತ್ರ**:—ಹಾಗಲ್ಲ ಮಹಾರಾಜ. ಮಕ್ಕಳಿಲ್ಲದ ನಿಮಗೆ, ಮಕ್ಕಳ

ವಿಯೋಗ ದುಃಖದಿಂದ ಮರಣವೆಂದರೆ, ಮಕ್ಕಳ ಭಾಗ್ಯವನ್ನು ಕರುಣಿಸಿದಂತಲ್ಲವೆ! ಆದ್ದರಿಂದ ಭಗವಂತನೇ ಈ ಶಾಪ ರೂಪದಿಂದ ನಿಮ್ಮನ್ನು ಆಶೀರ್ವದಿಸಿದನು. ಇನ್ನು ಚಿಂತಿಸದೆ ರಾಜಧಾನಿಗೆ ಹೋಗೋಣ ನಡೆಯಿರಿ. ಆದರೆ ಈ ವಿಷಯ ಮಾತ್ರ ಯಾರಿಗೂ ತಿಳಿಯದಿರಲಿ.

**ದಶರಥ**:—(ಆಶ್ಚರ್ಯದಿಂದ) ಹೌದು ಸುಮಂತ್ರ, ಇದೆಂತಹ ವಿಚಿತ್ರ. ಮಕ್ಕಳಿಲ್ಲದ ಕೊರಗಿನ ಬೇಸರದ ಬೇಟೆ-ಬೇಟೆಯಲ್ಲಿ ಅನಿರೀಕ್ಷಿತವಾಗಿ ಮುನಿ ಕುಮಾರನ ಮರಣ-ಶಾಪ ರೂಪದಿಂದ ಪುತ್ರ ಲಾಭದ ವರ- ಆಹಾ, ಶ್ರೀ ಹರೀ ಇವೆಲ್ಲವೂ ನಿನ್ನ ಮಾಯೆ.-

(ತೆರೆ ಬೀಳುವುದು)

o———o

## —: ಪಾತ್ರಗಳು :—

### ಪುರುಷರು

| | | |
|---|---|---|
| ರಾಮಣ್ಣ | — | ನಾಯಕ |
| ಚಂದ್ರಶೇಖರ | — | ,, ಸೋದರಳಿಯ |

### ಸ್ತ್ರೀಯರು

| | | |
|---|---|---|
| ಕಮಲಮ್ಮ | — | ನಾಯಕನ ಪತ್ನಿ |
| ಸರೋಜ | — | ,, ಮಗಳು. |
| ಗುಂಡಮ್ಮ | — | ನೆರೆಯಾಕೆ |
| ನಿಂಗಿ | — | ಮುಸರೆ ಕೆಲಸದವಳು |

**ಕಾಲ**:—ಪ್ರಾತಃಕಾಲ ೮ ಘಂಟೆ]
**ಸ್ಥಳ**:—ರಾಮಣ್ಣನ ಮನೆ ]

**ಭಾಷಾ**:—ಆಧುನಿಕ

# ೩. ಸಿಹಿಪಾಕ

[ರಾಮಣ್ಣನ ಮನೆ. ರಾಮಣ್ಣ ಪೇಪರ್ ಓದುತ್ತಾ ಕುಳಿತಿದ್ದಾನೆ. ಕಮಲಮ್ಮ ತಂದಿಟ್ಟ ಕಾಫಿ ಮೇಜಿನ ಮೇಲಿದೆ. ಓದಿನಲ್ಲಿ ಮಗ್ನನಾಗಿದ್ದವನು ಹಠಾತ್ತನೆ ಕಾಫಿಯನ್ನು ನೋಡಿ, ಓದನ್ನು ನಿಲ್ಲಿಸಿ, ಕಾಫಿಯನ್ನು ಕುಡಿದು, ಸಕ್ಕರೆ ಸಾಲದ ಕಾರಣ ಕಮಲಮ್ಮನನ್ನು ಕೂಗುವನು]

**ರಾಮಣ್ಣ :**—ಕಮಲಾ, ಕಮಲಾ !

**ಕಮಲಮ್ಮ:**—[ಬಾಗಿಲ ಹತ್ತಿರ ಬಂದು ನಿಂತು] ಏನೂಂದ್ರೆ ?

**ರಾಮಣ್ಣ:**—ಏನಕ್ಕಾಫೀನೇ ಇದು! ಸಕ್ಕರೆ ಇಲ್ಲದೇ ಮಾಡೋದೂ ಹೊಸ ಪ್ಯಾಷನ್ ಏನು.

**ಕಮಲಮ್ಮ:**—ಸಾಲದು ಅಂತ ಹೇಳ ಬಾರದೇ ! ಬೇಕಾದರೆ ಇನ್ನು ಸ್ವಲ್ಪ ಹಾಕಿಸಿಕೊಳ್ಳಿ. (ನಿಂತಿರುವಳು)

**ರಾಮಣ್ಣ:**—"ಹಾಕಿಸಿಕೊಳ್ಳಿ" ಅಂತ ಹೇಳೋಕಿಂತ, ಹೋಗಿ, ತಂದು ಹಾಕಬಾರದೇ ?...........ಯಾಕೇ !................ಓ!!! ಸರಿ ಬಿಡು. ಅಲ್ಲವೇ, ಈವತ್ತು ಸಾಯಂಕಾಲ ನಿಮ್ಮಮ್ಮ ಹ್ಯಾಗಿದ್ರೂ ಬರುತಿದ್ದರು. ಅಷ್ಟರಲ್ಲೇ ಏನು ಸೂರೆ ಹೋಗುತ್ತಿತ್ತು ಅಂತ ಹೀಗೆ........

**ಕಮಲಮ್ಮ:**—ಸಾಕು ಸುಮ್ಮನಿರೀ ಅಂದ್ರೆ–ಈಗ ನಿಮಗೇನು ಕಷ್ಟ. ಪಕ್ಕದ ಮನೆ ಗುಂಡಮ್ಮನವರಿಗೆ ಹೇಳಿ ಕಳಿಸ್ತೀನಿ. ಆಕೆ ನಮಗೆ ಬಳಗ ಅಲ್ಲದಿದ್ದರೂ, ಬಹಳ ಒಳ್ಳೇಯವರು. ಈವತ್ತು ಒಂದಿಷ್ಟು ಮಾಡಿ ಹಾಕ್ತಾರೆ.

**ರಾಮಣ್ಣ :**—ಯಾಕೆ ? ನನಗೇನು ಅಡಿಗೆ ಮಾಡೋಕೆ, ಬರೋಲ್ಲ ಅಂತಲೋ ? ಪಾಪ-ಆ ಮುದುಕೀಗೆ, ಕಣ್ಣು ಕಾಣೋಲ್ಲ; ನಡು ಬಗ್ಗಿ ಹೋಗಿದೆ; ಅಲ್ಲದೆ ಈವತ್ತು ಏಕಾದಶಿ-ಉಪವಾಸ ಆಕೇನ ಯಾಕೆ ಹಿಂಸೆ ಪಡಿಸಬೇಕು! ನನಗೆ ಈವತ್ತು ರಜಾ, ಹುಡುಗರಿಗೂ ಸ್ಕೂಲಿಲ್ಲ. ನಾನೇ ಅಡಿಗೆ ಮಾಡ್ತೀನಿ.

**ಕಮಲಮ್ಮ**:—(ನಗುತ್ತಾ) ನನಗೇನು ಹೆದರಿಕೆ ಅಂದ್ರೇ, ನೀವು ಅಡಿಗೆಗೆ ನಿಂತ್ರೆ, ಗುಂಡಮ್ಮನವರ ಜೊತೆಗೆ, ನಾವೂ ಏಕಾದಶೀ ವ್ರತ ಮಾಡ ಬೇಕೇನೋ ಅಂತ!

**ರಾಮಣ್ಣ**:—ಅಂದ್ರೆ!—ಅಡಿಗೆ ಅನ್ನೋದು ಹೆಂಗಸರಿಗೆ ಮಾತ್ರ ಒಲಿದ ವಿದ್ಯೆ ಅಂತಲೋ ? ಈವತ್ತು ನೋಡೇ-ನನ್ನ ಅಡಿಗೆ ಮಜಾ ಹೇಗಿ ರುತ್ತೇ ಅಂತ–

**ಕಮಲಮ್ಮ**:—ಒಳ್ಳೇ ವಿಚಿತ್ರದೋರು ನೀವು! ಅಲ್ಲಾ ಅಂದ್ರೆ, ಈಗ ಸ್ವಲ್ಪ ಹೊತ್ತಿನ ಕೆಳಗೆ, ನಿಮ್ಮ ತಲೇ ಮೇಲೆ ಅಡಿಗೆ ಬಿತ್ತೂಂತ ಗೊಣಗಾ ಡಿದಿರಿ-ಈಗಾಗಲೇ, ಈ ಅಡಿಗೆ ಮಾಡೋಕೆ ಎಷ್ಟೋ ದಿನದಿಂದ ತಪಸ್ಸು ಮಾಡ್ತಾ ಕಾದಿರೋರ ಹಾಗೆ ಮಾತಾಡ್ತೀರಿ-ಹೋಗಲಿ. ತಂಗಳನ್ನ ಮಿಕ್ಕಿದೆ, ಹುಡುಗರಿಗೆ ಹಾಕ್ಕೊಂಡು ತಿನ್ನಿ ಅನ್ನಿ. ನೀವು ಇನ್ನೊಂದು ಕಪ್ ಕಾಫಿ ಕುಡೀರಿ. ಹೇಗಾದರೂ ಒಳ್ಳೇದು. "ಕೀಳೆಣಿಸಿ' ಮೇಲೆಣಿಸ," ಅಂತಾರೆ ದೊಡ್ಡೋರು.

**ರಾಮಣ್ಣ**:—ನೋಡಿದೆಯಾ! ಷುರುಮಾಡಿದೆ ನಿನ್ನ ವ್ಯಾಖ್ಯಾನ-ನನಗೆ ಗೊತ್ತು-ನೀನೀ ಅಪಶಕುನ ನುಡೀತಿ ಅಂತ-ಅದಕ್ಕೆ ಬದಲು, ನಿನಗೂ ಮಕ್ಕಳಿಗೂ, ಏನೇನು ಬೇಕೋ, ಅದನ್ನ ಮಾಡಿಸಿಕೊಂಡು ಯಾಕೆ ತಿನ್ನಬಾರದು?

**ಕಮಲಮ್ಮ**:—ಸುಮ್ಮನಿರೀ ಅಂದ್ರೆ! ಯಾರಾದರೂ ಕೇಳಿದರೆ ನಕ್ಕಾರು. ಗಂಡನ ಕೈಲಿ ಪಂಚಭಕ್ಷ್ಯ ಪರಮಾನ್ನ ಮಾಡಿಸಿಕೊಂಡು ನುಂಗೋ ಇವಳಿಗೇನು ಬಂತು ಕೇಡು ಅಂತ. ಮನೇಲಿ ಯಾರೂ ಹೆಣ್ಣು ದಿಕ್ಕಿ ಲ್ಲದೆ ಇರೋವಾಗ ಹೊರಗಿರೋಕೇ ನನಗೆಷ್ಟೋ ಹೀನಾಯವಾಗಿದೆ!

**ರಾಮಣ್ಣ**:—ಒಳಗೇ ಇರಬಹುದಲ್ಲಾ !

**ಕಮಲಮ್ಮ**:—ಸಾಕು ನಿಲ್ಲಿಸಿ ನಿಮ್ಮ ಹಾಸ್ಯಾನಾ, ಹುಡುಗರಿದಾರೆ. ಅವು ಗಳ ಎದುರಿಗೆ ಇದು ಆಡಬೇಕು, ಇದು ಆಡಬಾರದು ಅಂತ ತಿಳಿ ಯೋಲ್ಲ ನಿಮಗೆ.

**ರಾಮಣ್ಣ**:—ಹೋಗಲಿ ಬಿಡು. ಇನ್ನು ಐದು ನಿಮಿಷ. ಅಂಗಡೀಗೆ ಹೋಗಿ ಬಂದ್ಬಿಟ್ಟೀ ಅನ್ನು ಅಡಿಗೇಗೆ. (ಹೋಗುವನು)

ಕಮಲಮ್ಮ:—ಲೇ ಸರೋಜಾ, ಲೋ ಚಂದ್ರೂ, ಬನ್ನಿ ಇಲ್ಲಿ (ಇಬ್ಬರೂ ಬರುವರು)

ಸರೋಜ:—ಏನು ಅಮ್ಮಾ!

ಕಮಲಮ್ಮ:—ಸರೋಜಾ, ನಾನು ಒಳಗೆ ಬರೋಲ್ಲ. ಮಗು ಎದ್ದಿದ್ರೆ ಕಾಫಿ ಕುಡಿಸು. ನಿಮ್ಮ ತಂದೆ ಅಡಿಗೆ ಮಾಡ್ತಾರೆ. ಅಡಿಗೆ ಮನೆ ಚೊಕ್ಕಟವಾಗಿ ಗುಡಿಸು. ಸಿಂಗೀಗೆ ಮುಸಿ ಇಲ್ಲದ ಹಾಗೆ ಚೆನ್ನಾಗಿ ಪಾತ್ರೆ ತೊಳಕೊಡು ಅಂತ ಅನ್ನು. ಎಲ್ಲೂ ಹೋಗ್ಬೇಡಿ. (ಹೊರಕ್ಕೆ ಹೋಗುವಳು)

ಚಂದ್ರು:—ಸರೋಜಾ, ಈವತ್ತು ನಿಮ್ಮ ಅಪ್ಪ ನಮಗೆ ಮಣ್ಣಿಗೆ, ಮಣ್ಣು ತಿನ್ನಿಸುತ್ತಾನೆ, ಏನು ಮಾಡೋಣೇ ?

ಸರೋಜ:—ಮಾಡೋದೇನು-ಯಾರೂ ಕಾಣದ ಹಾಗೆ ಮೆತ್ತಗೆ ಇಲ್ಲಿಂದ ಎದ್ಹೊಯ್ತು. ಅಡಿಗೆ ಆದ್ಮೇಲೆ ಬರೋಣ.

ಚಂದ್ರು:—ಆಮೇಲೆ ಸಿಕ್ಕೊಂಡ್ರೆ ಒದೇ ಬೀಳುತ್ತೆ. ನಾನೇನೋ "ಟೆಸ್ಟ್" ಇದೆ ಅಂತ ನೆಪ ತೆಕ್ಕೊಂಡು ಓತ್ತಾ ಕುತ್ಕೋತೀನಿ. ಓದ್ತಾ ಇದ್ರೆ ಮಾವ ನನ್ನ ಮಾತಾಡಿಸೋಲ್ಲ.

ಸರೋಜ:—ಹಾಗಾದರೆ ನಾನೂ, ಹಾರ್ಮೋನಿಯಂ ಪಾಠ ಗಟ್ಟಿ ಮಾಡೋಕ ಹಾಗೆ ಕೂತುಕೋತಿನಿ.

[ಚಂದ್ರು—"ಶ್ರೀ ವಧುವಿನಂಬಕ ಚಕೋರಕಂ ಪೊರೆಯೆ" ಎಂಬ 'ಜೈಮುನಿ ಭಾರತದ ಪದ್ಯವನ್ನು ಅರ್ಥ ತಾತ್ಪರ್ಯಗಳ ಸಹಿತ ಓದಲು ಷುರುಮಾಡುವನು. ಸರೋಜ—ಹಾರ್ಮೋನಿಯಂ ಶೃತಿಯಲ್ಲಿ, "ಸುಗರಿಗ ಸರಿಗಮ ಎಂದು ಸರಳೆವರಸೆಯನ್ನು ಅಭ್ಯಾಸ ಮಾಡುವಳು. ರಾಮಣ್ಣ ಕಮಲಮ್ಮ, ಇಬ್ಬರೂ ಹೊರಗಿನಿಂದ ಬರುವರು]

ರಾಮಣ್ಣ:—ಸರೋಜಾ, ಇಲ್ಲಿ ಬಾಮ್ಮಾ ಈವತ್ತು ಹಾರ್ಮೋನಿಯಂ ಪಾಠಬೇಡ. ಮೇಷ್ಟ್ರು ಬಂದರೆ, ಪಾಠಬೇಡಿ ಅಂತ ಹೇಳ್ತೀನಿ. ನಾನು ಅಡಿಗೆ ಮಾಡ್ತಾ ಇದ್ರೆ, ನನಗೆ ಸ್ವಲ್ಪ ಸಹಾಯ ಮಾಡ್ತೀಯಾಮ್ಮ! ಲೋ ಚಂದ್ರೂ, ನೀನೂ, ಅಷ್ಟೆ. ಆ ಪುಸ್ತಕ ಮುಚ್ಚಿಟ್ಟು ಇಲ್ಲಿಬಾ.

**ಚಂದ್ರು**:—ನಾಳೆ ಟೆಸ್ಟಿದೆ ಮಾವಾ !

**ರಾಮಣ್ಣ**:—ಸಾಕೋ, ನನಗೂ ಗೊತ್ತಿದೆ. ಹತ್ತು ಘಂಟೆಗೆ ನನ್ನ ಅಡಿಗೆ ಕೆಲಸ ಮುಗಿತ್ತೆ. ಊಟ ಮಾಡಿದ ಮೇಲೆ ಸಾಯಂಕಾಲವೆಲ್ಲಾ ಓದು. ಯಾರೂ ಕಾಣದ ಟೆಸ್ಟ್-ಕಮಲಾ, ಇನ್ನು ಬೇಗ ಸ್ನಾನ ಮಾಡಿ ಕೊಂಡು ಬರ್‍ತೀನಿ. (ಹೋಗುವನು)

**ಕಮಲಮ್ಮ**:—ಅಲ್ರೀ, ಕೆಲಸ ತಪ್ಪಿಸಿ ಕೊಳ್ಳೋಕೆ, ಈ ಆಟ ತೆಗೆದರೆ, ಅವರು ಜಗ್ಗುತ್ತಾರೆಯೇ ? ಲೇ ಸರೋಜಾ, ಒಳಗೆ ಹೋಗಿ ಅಡಿಗೆ ಒಲೆ ಹಚ್ಚಿಸು. ಚಂದ್ರೂ, ಬುಟ್ಟೀಲಿ ಏನು ತರಕಾರಿ ಇದೆ ನೋಡು. ಹಾಗೇ ನಿಂಗೀ ಪಾತ್ರೆ ತೊಳದ್ದಾಳ್ಯೇ ಕೇಳು.

**ಚಂದ್ರು**:—ಅತ್ತೇ, ಹಿಂದೊಂದು ಸಲ ಮಾವ ಅಡಿಗೆ ಮಾಡಿದ್ದ-ಜ್ಞಾಪಕ ಇದೆಯೇ ? ಉಕ್ಕರಿಸಿದ ಹಿಟ್ಟಿನ ಹಾಗಿದ್ದ ಅನ್ನ........

**ಕಮಲಮ್ಮ**:—ಉಪ್ಪಿನ ಮಯ ಸಾರು-ಬಾಯಿಗಿಟ್ಟರೆ ಸಾಕು, ಬ್ರಂಹ ರಂಧ್ರಕ್ಕೆ ಏರಬೇಕು. ಖಾರ-ಅಂತ ಚಟ್ನಿ-ಮರೆಯೋಕಾದೀತೆ.

**ಚಂದ್ರು**:—ಅಲ್ಲ ಅತ್ತೇ, ಯಾರಾನ್ನಾದರೂ ಕರೆಸಬಾರದಾಗಿತ್ತೇ ಈವತ್ತು ಒಂದು ದಿನಕ್ಕೆ-ಸಾಯಂಕಾಲಕ್ಕೆ ಅಜ್ಜಿ ಬರ್‍ತಿದ್ದಳು.

**ಕಮಲಮ್ಮ**:—ನಾನೇನು ಮಾಡ್ಲಿ, ಹೇಳು. ಪಕ್ಕದ ಮನೆ ಗುಂಡಮ್ಮನವರನ್ನು ಕರೆಸೋಣಾಂದ್ರೆ, ಬೇಡವಂತೆ; ತಾವೇ ಮಾಡ್ತಾರಂತೆ. ಅವರ ಹಟ ಕಂಡಿದೀ ತಾನೆ!

**ಚಂದ್ರು**:—ಈ ಮಾವ ಯಾವಾಗಲೂ ಹೀಗೇನೇ! ತಾನೂ ತೊಂದರೆ ಪಡ್ತಾನೇ; ಮಿಕ್ಕೋರಿಗೂ ತೊಂದರೆ ಕೊಡ್ತಾನೆ!

**ಕಮಲಮ್ಮ**:—ಬಂದ್ರೂ ಅಂತ ಕಾಣತ್ತೆ. ನೀನು ಹೋಗಿ ತರಕಾರಿ ನೋಡಪ್ಪಾ. ಸರೋಜ ಏನು ಮಾಡ್ತಾಳೆ. (ಚಂದ್ರು ಹೋಗುವನು)

**ರಾಮಣ್ಣ**:—(ಮಡಿಯುಟ್ಟು, ಅಡಿಗೆಗೆ ಸಿದ್ಧವಾದ ರೀತಿಯಲ್ಲಿ ಪ್ರವೇಶಿಸಿ) ಕಮಲಾ, ನಾನು ಸಿದ್ಧವಾಗಿದೀನಿ. ಆ ಬ್ರಾಂಹಣ ಮಡಿ ಸೀರ್‍ನೂ ತಂದಿಟ್ಟೆ. ಇನ್ನು ಏನು ಮಾಡಬೇಕೋ ಬೇಗ ಹೇಳು.

**ಕಮಲಮ್ಮ**:—ಸುಮ್ಮನೆ ತೊಂದರೆ ಪಡಬೇಡೀ ಅಂದ್ರೇ ; ಇಷ್ಟು ಅನ್ನ, ಸಾರು ಮಾಡಿ ನೆಲುವಿನ ಮೇಲೆ ಹಪ್ಪಳಹಾಕಿದ ಮೊಸರಿದೆ. ಉಪ್ಪಿನಕಾಯಿದೆ. ಅಷ್ಟು ಬೇಕೂಂದ್ರೆ ನಾಲ್ಕು ಹಪ್ಪಳ ಸುಡಿ ಸಾಕು.

**ರಾಮಣ್ಣ** :—ಅಲ್ವೇ, ಯಾವ ಕರ್ಮ ಅಂತ ಏನೂ ಮಾಡಬೇಡೀ ಅಂತೀಯೋ? ಅಲ್ಲದೆ, ದೊಡ್ಡೋರು ನಾವು, ಹೇಗಾದರೂ ಸುಮ್ಮನಿರುತ್ತೇವೆ. ಮಕ್ಕಳಿಗೆ ಶಾಗಾಗತ್ಯೇ? ಸರೋಜಂಗೆ ಪಲ್ಯವೋ, ಗೊಜ್ಜೋ, ಇದ್ದೇ ಇರಬೇಕು. ಚಂದ್ರೂಗೆ ಮೊಸರು ಬಜ್ಜಿ ಬೇಕೇ ಬೇಕು.

**ಕಮಲಮ್ಮ** :— ಹೂಂ – ಇನ್ನೂ – ಹೇಳಿ.

**ರಾಮಣ್ಣ** :—ಹೌದೇ ಮತ್ತೇ! ಊಟಕ್ಕೆ ಕೂತಮೇಲೆ ಅರಹೊಟ್ಟೆ ಯಾಕೆ ತಿನ್ನಬೇಕು ಹೇಳು.

**ಕಮಲಮ್ಮ** :—ಪೂರ್ತಿ ಹೊಟ್ಟೆ ತಿನ್ನೋಕೆ, ಮಾಡೋಕೆ ಬರಬೇಕಲ್ಲಾ !

**ರಾಮಣ್ಣ** :—ಅದೋ ನಿನ್ನ ಭಯ! ನಮಗೆಲ್ಲಾ ಬರುತ್ತೆ. ಬೇಕಾದರೆ ಸಂತರ್ಪಣೆ ಅಡಿಗೇಗೂ ಸಿದ್ಧ. ಅದೂ ಅಲ್ಲದೆ, ಮನುಷ್ಯ ಕಷ್ಟ ಪಡೋದು ಯಾಕೆ ಹೇಳು. ಹೊಟ್ಟೆಗೋಸ್ಕರ ಅಲ್ವೇ?

**ಕಮಲಮ್ಮ** :—ನಿಮ್ಮ ಮಾತು, ಮಾಡ್ಹಾಕೋರು ಇದ್ರೆ, ಆವಾಗ ಸರಿ.

**ರಾಮಣ್ಣ** :—ಅದೇ ಅಲ್ಲವೇ ನಾನೂ ಹೇಳೋದು! ಒಂದು ಗಾದೆ ಇದೆ. "ಗಾಳಿ ಬಂದಾಗ ತೂರಿಕೋ" ಅಂತ. ನಾನು ಇಷ್ಟು ಮಟ್ಟಿಗೆ ಮಾಡುತೀನಿ ಅನ್ನೋವಾಗ, ನೀನು ಸಂತೋಷಪಡಬೇ, ಏನೂ ಬೇಡ ಅಂತೀಯಲ್ಲಾ ಏನು ಹೇಳಲಿ-ನನಗೆ ಕಷ್ಟವಾಗುತ್ತೇ ಅಂತ್ಲೇನೋ? ಉತ್ಸಾಹವಿರುವಾಗ, ಎಷ್ಟು ಕೆಲಸವಾದ್ರೂ ಕಷ್ಟ ಕಾಣೋಲ್ಲ-ಇಲ್ಲ-ನನಗೆ ಅಡಿಗೇ ಬರೋಲ್ಲ ಅಂತಲೋ? ನೋಡು, ಈವತ್ತಿನ ಅಡಿಗೆ ನಳಪಾಕನ ಮೀರ್ಸಿ, ದೇವತೆಗಳಿಗೆ ಬಾಯಲ್ಲಿ ನೀರೂರಬೇಕು; ಹಾಗಿರಬೇಕು ಅಡಿಗೆ, ಮಾಡ್ತೀನೀ ನೋಡೇ!

**ಕಮಲಮ್ಮ** :—ನಿಮ್ಮ ಧರ್ಮ-ಸುಮ್ಮನಿರೀಂಪ್ರೆ, ಹಾಗೆ ಮಾತ್ರ ಮಾಡಬೇಡಿ ಇಲ್ಲದಿದ್ರೆ, ದೇವತೆಗಳು, ಪಿತೃದೇವತೆಗಳು, ಎಲ್ಲರೂ ಮೇಲಿಂದ ದುಮುಕಿಬಿಟ್ಟಾರು ಸಧ್ಯ!

**ರಾಮಣ್ಣ** :—ಲೇ, ಹತ್ತು ಘಂಟೆ ಒಳಗೆ ಅಡಿಗೆ ಮಾಡಿ, ನಿನಗೂ, ಮಕ್ಕಳಿಗೂ ಬಡಿಸದಿದ್ದರೆ ಆ ಮೇಲನ್ನು ಆ ಮಾತು! (ಗಡಿಯಾರದ ಕಡೆ

ನೋಡಿ) ಆಗಲೇ ಎಂಟೂ ಕಾಲು ಘಂಟೆ. ಬೇಗ ಹೇಳು. ಏನು ತರಕಾರಿ ಇದೇಂತ.

**ಕಮಲಮ್ಮ**:—ನಿಮ್ಮ ಇಷ್ಟ ಬಂದ ಹಾಗೆ ಮಾಡೀಂದ್ರೆ. ನನ್ನ ಕೇಳ ಬೇಡಿ. ಬುಟ್ಟೀಲಿ ಏನೋ ತರಕಾರಿ ಇದೆ. ಅದು ಸಾಲದಿಪ್ರೆ, ಮತ್ತಷ್ಟು ತರಿಸಿ, ಮಾರ್ಕೆಟ್ಟಿನಿಂದ – ನಿಮಗೆ ಯಾವ ಯಾವ ತರಕಾರೀಲಿ - ಏನೇನು ಪಲ್ಯ, ಹುಳಿ ಮಾಡಬೇಕು ಅನ್ನಿಸಿದರೆ ಹಾಗೆ ಮಾಡಿ.

**ರಾಮಣ್ಣ**:—ನಿಜತಾನೆ, ಆಮೇಲೆ ಆಕ್ಷೇಪಿಸೀಯೆ.

**ಕಮಲಮ್ಮ**:—ಛೇ, ಏನು ಮಾತು.

**ರಾಮಣ್ಣ**:—ಹಾಗಾದರೆ – ನಂದೇ ಸರ್ವ ಸ್ವತಂತ್ರ ಅನ್ನು.

**ಕಮಲಮ್ಮ**:—ಪೂರ್ತಿಯಾಗಿ.

**ರಾಮಣ್ಣ**:—ಸರಿ. ನೋಡು-ತೊವ್ವೆ, ಒಂದೋ ಎರಡೋ ಪಲ್ಯ-ಬದನೆ ಕಾಯೋ ಇಲ್ಲ ಸೌತೇಕಾಯೋ ಹಾಕಿ ಮೊಸರು ಬಜ್ಜಿ-ತಡಗಣಿ ಕಾಳೋ ಇಲ್ಲಾ ....

**ಕಮಲಮ್ಮ**:—ಕಡಲೇಕಾಳೋ ಹಾಕಿ ಹುಳಿ–ಇಲ್ಲದಿದ್ದರೆ ಕೂಟಿಗರಿ– ಪಂಚಮಿ ದಿನ ಮಾಡೋ ಕಲಸುಮೇಲೋಗರ.

**ರಾಮಣ್ಣ**:—ನಿಜ ಕಾಣೆ! ಸರಿಯಾಗಿ ಜ್ಞಾಪಿಸಿದೆ!

**ಕಮಲಮ್ಮ**:—ಇನ್ನೂ ಜ್ಞಾಪಿಸ್ತೀನಿ ಬೇಕಾದರೆ–ನಿಮಗೆ ಬೇಕಾದ ಅಡಿಗೇ-ಕೊಯಮುತ್ತೂರು ಕೂಟು-ಮಲಬಾರ್ ಅವ್ವೀಲ್-ಮೈಸೂರುಸಾರು—ಜೀರಿಗೆತಂಬೂಳಿ—ಮೆಂತ್ಯದ ಗೊಜ್ಜು—ಮೆಣಸಿನ ನೀರು –

**ರಾಮಣ್ಣ**:—ಅಗೋ ನೋಡಿದೆಯಾ? ಹಾಸ್ಯ ಮಾಡ್ತೀಯೆ.

**ಕಮಲಮ್ಮ**:—ಮತ್ತೆ ಇದ್ಯಾತರ ಕವಿತ್ವ ಹೇಳಿ. ಏನೋ ಈವತ್ತಿನ ಮಟ್ಟಿಗೆ ಇಷ್ಟು ಮಾಡಿಕೊಳ್ಳೋದು ಬಿಟ್ಟು, ಕೆಲಸಕ್ಕೆ ಬಾರದ್ದು ಹಚ್ಕೋತೀರಿ. ಸುಮ್ಮನೆ ಶ್ರಮಪಡತೀರಿ.

**ರಾಮಣ್ಣ**:—ಅದೇ ನನ್ನ ಹೆದರಿಕೆ!

**ಕಮಲಮ್ಮ**:—ಅದೂ ಅಲ್ಲಿದೆ ನೀವಿಷ್ಟೆಲ್ಲಾ ಮಾಡಿದರೆ ತಿನ್ನೋರು ಯಾರು ಹೇಳಿ. ನಮ್ಮ ಹುಡುಗರ ಆಟ ನಿಮಗೆ ಗೊತ್ತಿಲ್ಲವೇ? ಹಿಡಿ ಅನ್ನ

ತಿನ್ನೋಕೆ ಹಡಿಗೋಳು. ಸುಮ್ಮನೆ ಮಾಡೋದು; ಕಂಡೋರಿಗೆ ಸುರಿಯೋದು.

**ರಾಮಣ್ಣ**:—ಹೋಗಲಿ ಬಿಡು. ಪ್ರೋಗ್ರಾಂ ಬಹಳ ಕಷ್ಟ ಮಾಡೋಣ. ಸರೋಜಾ! ಸರೋಜಾ ಎಲ್ಲೀ?

**ಕಮಲಮ್ಮ**:—ಒಳಗೆ ಒಲೆ ಹತ್ತಿಸುತಿರಬಹುದು.

**ರಾಮಣ್ಣ**:-ಅದಕ್ಕೆ ಬರುತ್ತೀ! ನಾನೇ ಹೋಗಿ ಹಚ್ಚುತಿದ್ದೇ(ಹೋಗುವನು)

**ಕಮಲಮ್ಮ**:—ಚಂದ್ರು ಆ ತರಕಾರಿ ಬುಟ್ಟಿ ಇಲ್ಲಿಡು. ಇಳಗೇಮಣೇ ತೊಗೋ. ಸರೋಜಾ-ನೀ ಬಂದು ಈ ತರಕಾರಿ ಹೆಚ್ಚು.

(ಸರೋಜ ಬರುತ್ತಾಳೆ)

**ಚಂದ್ರು**:—ಅತ್ತೀ, ಇನ್ನು ಷುರುವಾಗುತ್ತೆ ನೋಡು, ಮಾವನ ಕೂಗಾಟ. ಅದು ತೊಗೊಂಬಾ, ಇದು ಮಾಡೂಂತ ಪ್ರಾಣ ತೆಗೀತಾನೆ. (ಒಳಗಿನಿಂದ ಚಂದ್ರೂ, ಚಂದ್ರೂ, ಎಂದು ಕೂಗು ಕೇಳಿಬರುವುದು) ಏನು ಮಾವಾ?

**ರಾಮಣ್ಣ**:—(ಒಳಗಿನಿಂದ) ಏನ್ಮಾಡ್ತೀಯಾ? ಒಂದು ಬೀಸಣಿಗೆ ತೊಗೊಂಬಾ ಸರ್ರನೇ!

**ಚಂದ್ರು**:—ಬಂದೇ ಮಾವಾ (ಹುಡುಕಲು ಹೋಗುವನು)

**ರಾಮಣ್ಣ**:—(ಹೊರಗೆ ಬಂದು) ಎಲ್ಲಿ ಹೋದನೇ ಅವನು-ಈ ಮನೇಲಿ ಒಂದು ಬೀಸಣಿಗೆ ಇಲ್ವೇ. ಇಷ್ಟು ಜನ ಇದೀರಿ, ಅನ್ನದಂಡ. ಕೇಳಿದಾಗ ಒಂದು ಸಾಮಾನೂ ಸಿಕ್ಕೋಲ್ಲ.

**ಕಮಲಮ್ಮ**:—ಇಲ್ದೇ ಏನು! ಎಲ್ಲಿ ಬಿಸಾಡಿವೆಯೋ ಹುಡುಗರು-ಯ್ಯಾಕೇಂದ್ರೆ. ಒಲೆ ಹತ್ತಲಿಲ್ಲವೇ! ಸ್ವಲ್ಪ ಸೀಮೆಯೆಣ್ಣೆ ಹಾಕಿ ಹಚ್ಚಿಸಬೇಕಾಗಿತ್ತು. ಸರೋಜ ನೀನಾದರೂ ನೋಡಮ್ಮಾ ಹೋಗು.

(ಸರೋಜ ಒಳಗೆ ಹೋಗುವಳು)

**ರಾಮಣ್ಣ**:—ಆಗಲೇ ಮೂರು ಸಲ ಹಾಕಿದ್ದಾಯ್ತು. ಹಾಳು ಒಲೆ ಗೋಳಾಡುತ್ತೆ. ಅದೇನು ಹಸೀ ಸೌದೇನೋ ಇಲ್ಲ ಮಳೇಲಿ ನೆಂದಿದೆಯೋ? ಹೊಗೆ ತುಂಬತ್ತೇ ಹೊರ್ತು ಹತ್ತಿದರೆ ಕೇಳು.

**ಚಂದ್ರು**:—(ಬಂದು) ಬೀಸಣಿಗೆ ಸಿಕ್ಕಲಿಲ್ಲ. ಈ ಊದುಕೊಳವಿ ಇದೆ ತೊಗೋ ಮಾವ.

**ರಾಮಣ್ಣ**:—ಮುಠ್ಠಾಳ. ಇದನ್ನ ತೊಗೊಂಬಾ ಅಂದ್ನೇ ನಿನ್ನಾ. ಇದ್ಯಾಕೆ ನಿನ್ನ ತಲೆ ಮೇಲೆ ಹಾಕೋಕೆ. (ಎಂದು ಕೆಳಗೆಸೆಯುವನು. ಅದು ಮುರಿಯುವುದು.

**ಸರೋಜ**:—(ಒಳಗಿನಿಂದ ಬಂದು) ಒಲೇ ಉರೀತಿದೇ ಅಣ್ಣಾ. (ರಾಮಣ್ಣ ಒಳಕ್ಕೆ ಹೋಗುವನು) ಅಮ್ಮಾ, ಒಲೇ ಹತ್ತಿಲ್ಲ ಅಂತ, ಅಣ್ಣ ಸುಮ್ಮನೇ ಒಲೆ ತುಂಬಾ, ಚಕ್ಕೆ, ಕಾಗದ, ಎಣ್ಣೆ ಬಟ್ಟೆ-ಎಲ್ಲಾ ಸೇರಿಸಿಬಿಟ್ಟಿದಾನಮ್ಮಾ. ಸ್ವಲ್ಪವೂ ಗಾಳಿ ಹೋಗದಿದ್ರೆ ಹ್ಯಾಗೆ ಹತ್ತತ್ತೆ.

**ಕಮಲಮ್ಮ**:—ಯಾವಾಗಲೂ ಹೀಗೆ ಇವರು, ಸುಮ್ಮನೇ ಆತುರ-ಸರೋಜಾ ನೀನು ಆ ತರಕಾರಿ ಹೆಚ್ಚಮ್ಮಾ.

**ನಿಂಗಿ**:—(ಪ್ರವೇಶಿಸಿ) ಚಂದ್ರಪ್ಪನೋರೇ ಹಿತ್ತಲಕಡೆ ಬಿದ್ದಿತ್ತು ಬೀಸಣಿಗೆ. ತೊಗೊಂಡು ಹೋಗಿ ಬುದ್ಧಿಯೋರಿಗೆ ಕೊಡೀಪ್ಪಾ.

**ರಾಮಣ್ಣ**:—(ಒಳಗಿನಿಂದ) ಇಲ್ಲೇ ಇದೆ ಬಾರೋ ಬೀಸಣಿಕೆ-ಮಡಿನೀರಿನ ಮೇಲೆ ಮುಚ್ಚಿದೆ. ಆ ಹೋಗಲಿ ಯಾರಿಗೆ ಕಾಣುತ್ತೆ.

**ಚಂದ್ರು**:—ಮಾವಾ, ನನಗೂ ಸಿಕ್ತು ಇಲ್ಲೊಂದು. ತೊಗೊಬರ್‍ತೀನಿ.

**ರಾಮಣ್ಣ**:—ಸಿಕ್ಕತೆ, ಸಿಕ್ಕತೆ,-ಕೆಲಸವಾದ್ಮೇಲೆ ಇನ್ನೂ ಇಪ್ಪತ್ತು ಸಿಕ್ಕತೆ. (ಹೊರಗೆ ಬಂದು) ಹನ್ನೆರಡು ವರ್ಷ ಹುಡುಕಿದರೂ, ಕಣ್ಣೆದುರಿಗಿದ್ದರೂ ನಿಮಗೆ ಕಾಣೋಲ್ಲ (ಸರೋಜನ ಕಡೆ ನೋಡಿ) ಸರೋಜ ಹಾಗೆ ಹೆಚ್ತಾ ಇದ್ದರೆ ಎಷ್ಟೊತ್ತಿಗೆ ನೀ ಮುಗಿಸೋದು. ಇಲ್ಲಿಕೊಡು ನಾನು ತೋರಿಸ್ತೀನಿ (ಎಂದು ಹೆಚ್ಚುತ್ತಾ) ನೋಡು ಹೀಗೆ ಎಲ್ಲಾ ಒಟ್ಟಿಗೆ ಜೋಡಿಸಿಕೊಂಡು, ಸರ ಸರ ಅಂತ ಹೆಚ್ಚಬೇಕು. (ಹೆಚ್ಚುವ ಸಡಗರದಲ್ಲಿ ಕೈಗೆ ಅಲಗು ತಗುಲಿ ರಕ್ತ ಬರುವದು)

**ಸರೋಜ**:—ಅಣ್ಣಾ, ಅಣ್ಣಾ! ಬೆರಳು ಕುಯ್ದು ರಕ್ತ ಸುರೀತಿದೆ.

**ರಾಮಣ್ಣ**:—ಪರವಾ ಇಲ್ಲ; ಈಗ ತಿಳೀತೇ ಹೆಚ್ಕೊ ತರಹ-ಲೋ ಚಂದ್ರು ಸ್ವಲ್ಪ ಸುಣ್ಣಾನೂ, ಒಂದು ಚೂರು ಬಟ್ಟೇನೂ ತೊಗೊಂಬಾ ಬೆರಳಿಗೆ ಕಟ್ಟಬೇಕು (ಚಂದ್ರ ಹೋಗುವನು)

**ಕಮಲಮ್ಮ**:—ಏನು ಆತುರಾಂದ್ರೀ ನೀವು! ಗುಂಡಮ್ಮನೋರು ಬಂದಿದ್ರೆ ಈ ಫಜೀತಿ ಒಂದೂ ಇರಲಿಲ್ಲ. "ಬೇಡ, ನಾನೇ ಮಾಡ್ತೀನಿ" ಅಂತ ಹಟ ಹಿಡಿದಿದ್ದೀರಿ.

**ರಾಮಣ್ಣ**:—ಫಜೀತಿ ಏನೇ ಇದರಲ್ಲೆಲ್ಲಾ; ಏನು ಕಷ್ಟ ಮಹಾ, ಸರೋಜಾ ಹೋಳು ಹೆಚ್ಚಿತೊಗೊಂಬಾ. ನಾನು ಒಳಗೆ ನೋಡ್ತೀನಿ (ಹೋಗುವನು)

**ಕಮಲಮ್ಮ**:—ಸಾಕಪ್ಪಾ ಸಾಕು ಈ ಹಾಳು ಅವಸ್ಥೆ, ಹೆಂಗಸರಿಗೆ.

**ರಾಮಣ್ಣ**:—(ಒಳಗೆ) ಚಂದ್ರೂ ಜೀಳೀ ಡಬ್ಬ ಎಲ್ಲಿ, ಎಷ್ಟು ಹಾಕಬೇಕು ಅಂತ ನಿಮ್ಮ ಅತ್ತೇನ ಕೇಳು.

**ಚಂದ್ರು**:—(ಬಂದು) ಅತ್ತೇ ಬೇಳೆ ಎಲ್ಲಿದೆ, ಎಷ್ಟು ಹಾಕಬೇಕು ಅಂತಾನೆ ಮಾವ.

**ಕಮಲಮ್ಮ**:—ಅಲ್ಲೇ ಅಲಮಾರ್‌ನಲ್ಲಿದೆ. ಒಂದೂವರೆ ಪಾವು ಹಾಕಿ ಅನ್ನಪ್ಪಾ

**ರಾಮಣ್ಣ**:—(ಒಳಗಿನಿಂದ) ಸಿಕ್ತು ಬಾರೇ! ಸರೋಜಾ ಆ ಹೋಳು ತೊಗೊಂಬಾ ಆ ಮೆಣಸಿನಪುಡೀನ ಈ ಕಡೆ ಕೊಡು. ಚಂದ್ರೂ ನೀನು ಈ ಸೌಟುತೊಳಕೊಂಬಾ. ಅನ್ನದ ಗಂಜಿ ಮೆತ್ತಿದೆ

**ಕಮಲಮ್ಮ**:—ಇದೇನು ಇವರ ಅವಾಂತರ. ಬೇಳೆ ಎಲ್ಲಿ ಅಂತಾರೆ-ಹೋಳು ತೊಗೊಂಬಾ ಅಂತಾರೆ; ಮೆಣಸಿನಪುಡಿ ಕೊಡಮ್ಮಾ ಅಂತಾರೆ ಏನು ಎಲ್ಲಾ ಒಟ್ಟಿಗೆ ಹಾಕಿ ಅಡಿಗೆ ಮಾಡಿದರೆ ದೇವರಿಗೇ ಪ್ರೀತಿ. ಮಾತಾಡಿದರೆ ಮೂಗಿನ ಮೇಲಿರುತ್ತೆ, ಕೋಪ. ಆಡೋಕಿಲ್ಲ ಅನುಭವಿಸೋಕಿಲ್ಲ.

**(ಕಾಲು ಘಂಟೆಯಾದ ಮೇಲೆ)**

[ಅಡಿಗೆ ಮನೆಯಿಂದ ರಾಮಣ್ಣನ ಗೊಣಗಾಟ ಕೇಳಿಬರುತ್ತಿದೆ.

**ಚಂದ್ರು**:—ಅತ್ತೇ, ಸಾಕು ಸಾಕು. ಮಾವನ ಕೈಲಿ ಅಡಿಗೆ ಮಾಡಿಸಿ ಊಟಮಾಡೋದಕ್ಕಿಂತ, ನಾವೂ ಏಕಾದಶೀ ಮಾಡಿದ್ದರೆ ಎಷ್ಟೋ ಪುಣ್ಯ ಬರುತ್ತಿತ್ತು.

**ಸರೋಜ**:—ಯಾಕಮ್ಮಾ, ಅಣ್ಣಾ ಹೀಗಾಡ್ತಾನೆ. ಹೇಳಿದನ್ನ ಮಾಡಿದರೂ ಕಷ್ಟ. ಮಾಡದೆ ಇದ್ರೂ ಕಷ್ಟ. ನಾವೇ ಮಾಡೋಕೆ ಹೋದರೆ, "ನಿಮಗೆ ಬರೋಲ್ಲ, ನಾ ಮಾಡ್ತೀನೀ" ಅಂತಾನೆ-ಸುಮ್ನಿದ್ರೆ, "ಏಕೆ ನಿಂತಿದಿರಿ ಎಮ್ಮೇ ಹಾಗೆ" ಅಂತಾನೆ. ಅಣ್ಣನ ಕೈಲಿ ಏಗೋದು ಬಹು ಕಷ್ಟವಮ್ಮ.

**ಕಮಲಮ್ಮ**:—ಸಧ್ಯ ಸುಮ್ಮನಿರಿ. ಅವರ ಕಿವೀಗೆ ಬಿದ್ದೀತು. ಅವರು ಯಾವಾಗಲೂ ಹೀಗೆ, "ಕೈಲಾಗದೋನು ಮೈ ಪರಚಿಕೊಂಡ" ಅಂದ್ಹಾಗೆ ಕೆಲಸ ಬರದಿದ್ರೆ, ಸುಮ್ಮನೆ ಗೊಣಗಾಡ್ತಾರೆ, ಅಷ್ಟೆ.

**ರಾಮಣ್ಣ**:—(ಹೊರಗೆ ಬಂದು) ಹುಶ್ ಆಗಲೇ ಒಂಬತ್ತು ಗಂಟೆ.

**ಕಮಲಮ್ಮ**:—ಏನೂಂದ್ರೆ, ಆಗಲೇ ಗಂಟೇ ನೋಡ್ತೀರಿ. ಅಡಿಗೆ ಆಯ್ತೇನು ಇಷ್ಟು ಬೇಗ.

**ರಾಮಣ್ಣ**:—ಸುಮ್ಮನಿರೇ ಸುಡುಗಾಡು ಅಡಿಗೆಗೆ ಬೆಂಕಿ ಹಾಕ. ಕೈ ಬೆಂದು ಹೋಗ್ತಿದೆ.

**ಕಮಲಮ್ಮ**:—ಯಾಕೇಂದ್ರೆ, ಗಂಜಿ ಬಿತ್ತೇನು, ಇಲ್ಲ ಕೆಂಡ ತಗಲಿತೋ ?

**ರಾಮಣ್ಣ**:—ಇಲ್ವೇ, ಕೈ ಕುಯ್ದಿತ್ತಲ್ಲಾ-ಬೇಳೆ ಬೆಂತೋ ಇಲ್ವೋ ಅಂತ ನೋಡೋವಾಗ, ಆ ಬೆರಳಿಗೆ ಸೌಟು ಬೇರೆ ತಗಲಿತು. ಅದು ಹಾಗಿರಲಿ, ಇದ್ಯಾವ ಬೇಳೆ ? ಬೇಯೋಲ್ಲವೇನು ? ಸ್ವಲ್ಪ ಸೋಡ ಗೀಡ ಹಾಕ್ಬೇಕೆ ?

**ಕಮಲಮ್ಮ**:—ಸೋಡ ಯಾಕೇಂದ್ರೆ, ಸ್ಥಳದ ಬೇಳೆ. ಒಂದು ನಿಮಿಷ' ಕರಗ್ಹೋಗತ್ತೆ.

**ರಾಮಣ್ಣ**:—ನಿನ್ನ ಮುಖ. ಆಗಿನಿಂದ ನೋಡ್ತೀನಿ. ಸ್ವಲ್ಪವೂ ಬೆಂದ್ರೆ ಕೇಳು

**ಕಮಲಮ್ಮ**:—ಮತ್ತೆ ಯಾಕೆ ಬೇಯೋಲ್ಲ. ಉಪ್ಪುಗಿಪ್ಪು ಹಾಕಿಲ್ಲ ತಾನೆ.

ರಾಮಣ್ಣ:—ನನಗೇನು ಅಷ್ಟು ತಿಳೀದೂ ಅಂದುಕೊಂಡೆಯೋ? ಮೊದಲು ಒಲೆ ಉರಿಯೋಕೆ ತೊಂದರೆ ಕೊಡ್ತೇಹೊರ್ತು ಈಗ ಚನ್ನಾಗಿ ಉರೀತಿದೆ. ಆ ಬೇಳೆ ಕಲ್ಲಿನ್ಹಾಗೇ ಇದೆ.

ಕಮಲಮ್ಮ:—(ಯೋಚಿಸಿ) ಸೀ ನೀರು ತಾನೆ, ಏಸರಿಗೆ ಇಟ್ಟಿರೋದು ?

ರಾಮಣ್ಣ:—ಯಾರಿಗೊತ್ತು, ಆ ಜಗಲೀ ಮೇಲಿದದ್ದು. ಆ ಹೊಗೇಲಿ ಸೀ ನೀರು ಉಪ್ಪು ನೀರು ಅಂತ ಯಾರು ಪರೀಕ್ಷಿಸಿದೋರು !

ಕಮಲಮ್ಮ:—ಅಯ್ಯೋ, ಆ ಜಗಲೀ ಮೇಲಿಂದು ಉಪ್ಪು ನೀರು ಅಂದ್ರೇ, ಭಾವಿದು. ಈಗ ಬ್ರಾಂಹಣ ತಂದ ತಾಮ್ರದ ಬಿಂದಿಗೇದು ಸೀನೀರು. ನಮ್ಮ ಭಾವಿ ನೀರಿನಲ್ಲಿ ಏನು ಮಾಡಿದರೂ ಪದಾರ್ಥ ಬೇಯೋಲ್ಲ. ಅದರಲ್ಲೂ ಹಾಕಿರೋದು ತೊಗರಿ ಬೇಳೇಂದ್ರೆ ಕೇಳಬೇಕಾದ್ದೇ ಇಲ್ಲ. ತರಕಾರಿ ಮಾತ್ರ ಏನೋ ಸುಮಾರಾಗಿ ಬೇಯುತ್ತೆ.

ರಾಮಣ್ಣ:—ಅದು ಬೆಂದಿಲ್ಲ. ಹಾಕಿದ ಹೋಳು ಹಾಕಿದ ಹಾಗೇ ಇದೆ. ಹಾಕಿ ಕಾಲು ಘಂಟೆ ಮೇಲೆ, ಬೆಂದಿರಬಹುದು ಅಂತ, ಸ್ವಲ್ಪ ಹುಳಿ, ಉಪ್ಪು, ಕಾರ ಹಾಕಿದೆ. ಈಗ ನೋಡಿದ್ರೆ ಉಗುರು ಊರಿದ್ರೆ ಕೇಳು.

ಕಮಲಮ್ಮ:—ಕೆಲವು ತರಕಾರಿ ಉಪ್ಪು ಹುಳಿ ಬಿದ್ರೂ ಬೇಯುತ್ತೆ. ಮಿಕ್ಕೋವು ಹಾಗಲ್ಲ. ಏನು ತರಕಾರಿ ಅದು-ಹಾಕಿರೋದು.

ರಾಮಣ್ಣ:—ಸವಿಲು ಕೋಸು ಕಾಣೆ.

ಕಮಲಮ್ಮ:—ಸರಿ ಬಿಡಿ. ಅದು ಬೇಯೋದೆ ಒಂದು ಗೋಳು. ಅದಕ್ಕೆ ಉಪ್ಪು ಹುಳಿ ಬೇರೆ ಬಿದ್ರೆ ಇನ್ನು ಕೇಳಬೇಕಾದ್ದೇ ಇಲ್ಲ.

ರಾಮಣ್ಣ:—ಈಗೇನ್ಮಾಡೂ ಅಂತಿಯಾ ?

ಕಮಲಮ್ಮ:—ನಾನೇನು ಹೇಳಲಿ. (ಅಷ್ಟರಲ್ಲಿ ಗುಂಡಮ್ಮ, ಹರೇರಾಮ ಹರೇರಾಮ ಎಂದು ಹೇಳುತ್ತಾ, ದೇವಸ್ಥಾನದಿಂದ ಒಂದು ಮುದುಕಿ, ಇಲ್ಲಿಗೆ ಬರುವುದು.)

ಗುಂಡಮ್ಮ:—ಕಮಲಮ್ಮಾ ? ಕಮಲಮ್ಮ:—ಬನ್ನೀ ಅಜ್ಜಮ್ಮ.

ಗುಂಡಮ್ಮ:—(ಸಂದರ್ಭವನ್ನು ನೋಡಿ ಗ್ರಹಿಸಿ) ಇದೇನೇ! ಯಜಮಾನರಿಗೆ ಮಡಿ ಉಡಿಸಿದ್ದೀಯೆ!-ಯಾವಾಗ್ಲೇ.

ಕಮಲಮ್ಮ:—ಈವತ್ತು ಬೆಳಗ್ಗೇನೆ. ಅವರೇ ಅಡಿಗೆ ಮಾಡ್ತಿದಾರೆ.

**ಗುಂಡಮ್ಮ**:—ನಿನ್ನ ಹುಚ್ಚಿಗೆ ಏನು ಹೇಳಲೇ ? ನನಗೆ ಹೇಳಿ ಕಳಿಸ ಬಾರದೇ. ಒಂದಿಷ್ಟು ಮಾಡ್ತಿದ್ದೆ. ಆತ ಯಾಕೆ ವೈ ಕೈ ನೋಯಿ-ಸಕೋಬೇಕು-ಹೆಂಗಸರು ನಾವಿರೋವಾಗ.

**ಕಮಲಮ್ಮ**:—ಈವತ್ತು ಏಕಾದಶೀ, ನಿಮಗೆ ಊಟವಿಲ್ಲ. ಸುಮ್ಮನೇ ಯಾಕೆ ತೊಂದರೇ ಅಂತ, ಅವರೇ ಮಾಡ್ತೀನೀ ಅಂದ್ರು.

**ಗುಂಡಮ್ಮ**:—ತೊಂದ್ರೆ, ಏನೇ ? ಏಕಾದಶೀ ಆದಾಕ್ಷಣ, ನಿಮಗಿಷ್ಟು ಮಾಡಿ ಬಡಿಸಿದರೆ ಪಾಪ ಬರುತ್ಯೇ? ಒಳ್ಳೇ ಜಾಣೇ ನೀನು. ಆಗಲೇ ಒಂಭತ್ತು ಗಂಟೆ. ಆ ಮಕ್ಕಳ ಗತಿ ಏನು. ಬಿಡು ಬಿಡು. ನೀವು ಹೋಗೀಪ್ಪಾ, ನಾನು ಮಾಡ್ತೀನಿ. ಚಂಪ್ರೂ, ಸರೋಜಾ, ಈ ಬಾಳೆ ಹಣ್ಣು ತಿಂದು ಆಡ್ತಿರಿ. ಒಂದು ಕ್ಷಣದಲ್ಲಿ ಊಟಕ್ಕೆ ಕರೀತೀನಿ (ಒಳಗೆ ಹೋಗುವಳು.)

**ರಾಮಣ್ಣ**:—ಕಮಲಾ, ಮುದುಕೀಗೆ ತೊಂದರೆ ಕೊಡಬಾರ್ದು ಅಂತಿದ್ದೆ. ಆದರೆ ಈ ಸಮಯಕ್ಕೆ ದೇವರೇ ಕಳಿಸಿದ ಮುದುಕೀನ.

**ಕಮಲಮ್ಮ**:—ಅಲ್ವೆ ಮತ್ತೇ. ಈ ಅಭಿನವ ನಳನ, ಅವಸ್ಥೆ ನೋಡಲಾರದೆ ಆ, ಆಪದ್ಬಾಂಧವನೇ ಅನುಗ್ರಹಿಸಿರಬೇಕು ಆಕೇನ! ಅತ್ಯೇಂದ್ರೇ!

(ತೆರೆ ಬೀಳುವುದು)

o———o

## —: ಪಾತ್ರಗಳು :—

### ಪುರುಷರು

| | | |
|---|---|---|
| ಗೋಪಾಲಮೂರ್ತಿ | — | ನಾಯಕ |
| ಸುಬ್ಬರಾವ್ | — | ದೇವಾಲಯದ ಕಾರ್ಯದರ್ಶಿ |
| ರಾಮಶಾಸ್ತ್ರಿ | — | " ಅರ್ಚಕ |

### ಸ್ತ್ರೀಯರು

| | | |
|---|---|---|
| ಸೀತಮ್ಮ | — | ಈತನ ಅಕ್ಕ |
| ಲಲಿತ | — | ವಧು |
| ಶಾರದಮ್ಮ | — | ಲಲಿತೆಯ ತಾಯಿ |

[ಭಕ್ತಾದಿಗಳು; ವಾಲಗದವರು; ವಾದ್ಯಗಾರರು ಇತ್ಯಾದಿ]

**ಕಾಲ:—ಆಧುನಿಕ** **ಭಾಷಾ:—ಆಧುನಿಕ**

**ಸ್ಥಳ:— 1 ಗೋಪಾಲಮೂರ್ತಿಯ ಮನೆ**
**2 ದೇವಸ್ಥಾನ**

## ೪. ಸ್ವಯಂವರ

### ದೃಶ್ಯ ೧

(ಗೋಪಾಲ ಮೂರ್ತಿಯ ಮನೆ)

**ಶಾರದಮ್ಮ**:—(ಪ್ರವೇಶಿಸಿ) ಸೀತಮ್ಮಾ, ಸೀತಮ್ಮಾ!

**ಸೀತಮ್ಮ**:—(ಒಳಗಿನಿಂದ ಬಂದು) ಓಹೋ! ಬನ್ನಿ ಶಾರದಮ್ಮ ಬಹಳ ಅಪರೂಪ, ಆಯಿತೇ ಅಡಿಗೆ ಕೆಲಸ.

**ಶಾರದಮ್ಮ**:—ಆಯ್ತುಮ್ಮಾ, ನಿಮ್ಮದಾಯ್ತೇ. ನಿಮ್ಮನೆಗೆ ಬರೋದೇನು ಅಪರೂಪ ಹೇಳಿ; ಎಲ್ಲೀ ನಿಮ್ಮ ತಾಯಿ.

**ಸೀತಮ್ಮ**:—ಪುರಾಣಕ್ಕೆ ಹೋದಳು. ನೋಡಬೇಕಾಗಿತ್ತೇಂದ್ರೆ.

**ಶಾರದಮ್ಮ**:—ಹು, ನಾಡಿದ್ದು ಬಂದು ಬಿಡು ಅಂತ ಕಾಗದ ಬರೆದಿದಾರೆ. ಹೊರಡೋಕೆ ಮುಂಚೆ-ಅದೇ ನಮ್ಮ ಲಲಿತ್ಸೂ ವಿಷಯ-ನಿಮ್ಮ ತಾಯೀ ಅಭಿಪ್ರಾಯ ಕೇಳಿದ್ದರೆ ಚನ್ನಾಗಿತ್ತು, ಅಂತ-ಮುಖ್ಯ ನೀವು ದೊಡ್ಡ ಮನಸ್ಸು ಮಾಡಬೇಕು ಸೀತಮ್ಮಾ, ಅವರೇನಂತಾರೆ ?

**ಸೀತಮ್ಮ**:—ನಮ್ಮ ತಾಯಿಗೆ ಇಷ್ಟವಿದೆ. ಜಾತಕ ಚನ್ನಾಗಿದೆ. ನನಗೇನೋ ಲಲಿತನೇ ಗೋಪೂಗೆ ತಕ್ಕ ಹೆಂಡತಿ ಅನ್ನಿಸುತ್ತೆ. ಆದರೆ ಅವನ್ನೊಪ್ಪದೇ ಬಾಕಿ. ಈ ಕಾಲದ ಹುಡುಗರು-ಕೈ ಹಿಡಿಯೋಳು ಹ್ಯಾಗ್ಯಾಗೋ ಇರಬೇಕು ಅಂತ ಸಮ್ಮನೆ ಮನಸ್ಸಿನಲ್ಲೇ ಗುಣಸ್ತಿರುತ್ತಾರೆ. ಅದರಲ್ಲೂ ನಮ್ಮ ಗೋಪೂಗಂತೂ, ಆ ಹೆಂಡತಿಯ ಗೋಳು ನಾಗರೀಕತೆ ಮೂರ್ತಿಯಾಗಿರಬೇಕಂತೆ.

**ಶಾರದಮ್ಮ**:—ನಮ್ಮ ಲಲಿತನೂ ಈ ವರ್ಷ S. S. L. C ಗೆ ಕಟ್ಟಿದಾಳೆ. ಸಂಗೀತದಲ್ಲಿ ಪ್ರೌಢ ಪರೀಕ್ಷೆಗೆ ಕೂತಿದಾಳೆ. ನೋಡೋಕು ತಕ್ಕ ಮಟ್ಟಿಗಿದಾಳೆ. "ಹೆತ್ತೋರಿಗೆ ಹೆಗ್ಗಣ ಮುದ್ದು" ಅನ್ನಬೇಡಿ. ನೋಡಿದೋರೂ ಲಕ್ಷಣವಾಗಿದಾಳೆ ಹುಡುಗಿ ಅಂತಾರೆ.

**ಸೀತಮ್ಮ**:—ನಮಗೇನು ಕಾಣೋಲ್ಲವೇ ಶಾರದಮ್ಮ. ನನಗೂ ನಮ್ಮ ಅಮ್ಮನಿಗೂ, ಅವಳೇ ಗೋಪೂಗೆ ಸರಿಯಾದೋಳು ಅನ್ನಿಸುತ್ತೆ. ಅವನಿಗೆ, ಮುಖ್ಯವಾಗಿ ಅವನ ಹೆಂಡತಿ, ಹಾಡೋಳಾಗಬೇಕು. ಹೆಂಗಸರ ಸಂಗೀತ ಅಂದ್ರೆ ಅವನಿಗೆ ಅಲಕ್ಷ್ಯ. "ಏನೋ ಹೇಳ್ತಾರೇ ಹೊರತು ಶಾಸ್ತ್ರೀಯವಾಗಿರೋಲ್ಲ" ಅಂತಾನೆ. ನಿಮ್ಮ ಲಲಿತ ಹಾಡೋದು ಅವನು ಒಪ್ಪಿದರೆ, ಮಿಕ್ಕದೆಲ್ಲಾ ಸರಿಯಾದ್ಹಾಗೇ ಅನ್ನಿ.

**ಶಾರದಮ್ಮ**:—ಅವಳಿಗೂ, ಎರಡು ಮೂರು, ಪದಕ ಬಂದೀದೇಂದ್ರೆ, ಬಹುಮಾನವಾಗಿ-ಸಂಗೀತ ಸ್ಪರ್ಧೆಗೆ ನಿಂತಿದ್ದಳು. ವೀಣೆ ಬಾರಿಸುವುದ ರಲ್ಲೂ, ಬಾಯಿ ಹಾಡುಗಾರಿಕೇಲು, ಈ ವರ್ಷ ಮೊದಲನೆಯ ಬಹು ಮಾನ ಬಂತು. ಜಂಬಕ್ಕೆ ಹೇಳಿಕೋತಾಳೆ ಅನ್ನಬೇಡಿ, ಬೇಕಾದರೆ ನೀವೇ ಹಾಡಿಸಿ ಕೇಳಿ.

**ಸೀತಮ್ಮ**:—ನಾನೂ ಕೇಳಿದೀನಿ ಅಂದ್ರೆ. ಮೊನ್ನೆ ನಮ್ಮ ಅಮ್ಮ, ನಾನೂ ಕೇಳಿದೆವು. ಚನ್ನಾಗಿ ಹಾಡ್ತಾಳೆ. ನಮಗೇನು, ಅವನು ಒಪ್ಪಿದರೆ ಸರಿ.

**ಶಾರದಮ್ಮ**:—ಏನೋ ಸೀತಮ್ಮ, ನೀವು ದೊಡ್ಡ ಮನಸ್ಸು ಮಾಡಿ ನಿಮ್ಮ ತಮ್ಮನ್ನ ಒಪ್ಪಿಸಬೇಕು. ಅದು ನಿಮ್ಮ ಭಾರ. ಇಷ್ಟರ ಮೇಲೆ ನಮ್ಮ ಲಲಿತೂ ಪುಣ್ಯ. ಇನ್ನು ನಾನು ಬರ್ತೀನಿ ಅಂದ್ರೆ.

**ಸೀತಮ್ಮ**:—ತಡೀರೀಂದ್ರೆ, ಕುಂಕ್ಮ ಕೊಡ್ತೀನಿ. (ಕುಂಕುಮ ಕೊಡುತ್ತಾ) ಅಂದಹಾಗೆ, ಶಾರದಮ್ಮಾ, ಸಾಯಂಕಾಲ ದೇವಸ್ಥಾನದಲ್ಲಿ, ಈವತ್ತು ನಮ್ಮ ಮನೇ ಮಂಗಳಾರತಿ. ನೀವು ಖಂಡಿತ ಬರಬೇಕು. ಹಾಗೇ ಲಲಿತನ್ನೂ ಕರೆಕೊಂಡು ಬನ್ನಿ. ಅಲ್ಲೇನಾದರೂ ಹಾಡು ಅಂದ್ರೆ, ನಾಚಿಕೆ ಪಡ್ದೆ ಹಾಡೋ ಹಾಗೆ ಹೇಳಿ. ಬರ್ತೀರಾ,

**ಶಾರದಮ್ಮ**:— ಅಗತ್ಯವಾಗಾಗ್ಲಿ. ಬರ್ತೀನಿ ಸೀತಮ್ಮಾ (ಹೊರಡುವಳು)

**ಗೋಪಾಲ**:—(ಪ್ರವೇಶಿಸಿ) ಯಾರಕ್ಕಾ ಬಂದಿದ್ದೋರು.

ಸೀತಮ್ಮ:—ಪ್ಲೀಡರ್ ರಾಮರಾಯರ ತಂಗಿ. ಇಷ್ಟಕ್ಕೂ ಯಾರಾದರೆ ನಿನಗೇನು ? ಜವಾಬು ಕೊಡೋರು ನಾವಿರೋವಾಗ!

ಗೋಪಾಲ:—ಇದ್ಯಾಕಕ್ಕಾ ಇಷ್ಟು ಕೋಪ? ಅವರೇನು ಕೇಳಿದರು.

ಸೀತಮ್ಮ:—ಎಲ್ಲಾರೂ ಕೇಳೋದನ್ನೇ ಅವರೂ ಕೇಳಿದರು. ನನಗೂ, ಅಮ್ಮನಿಗೂ, ಜವಾಬು ಹೇಳಿ ಸಾಕಾಗಿ ಹೋಗಿದೆ.

ಗೋಪಾಲ:—ಓ! ನನ್ನ ಮದುವೆ ವಿಷಯನೇ! ಅಲ್ಲಕ್ಕಾ, ನನಗೆ ಇಲ್ಲದ ಶ್ರದ್ಧೆ, ಇತರರಿಗೆ ಇಷ್ಟು ಇದೆಯಲ್ಲಾ ಅಂತ, ನನಗೆ ಆಶ್ಚರ್ಯ ವಾಗುತ್ತೆ.

ಸೀತಮ್ಮ:—ಸಾಕು ಸುಮ್ಮನಿರೋ, ಒಂದು ಗಂಡಿದೆ ಅಂತ ಕಂಡರೆ, ಹತ್ತು ಜನ ಹೆಣ್ಣು ಹೆತ್ತೋರು ಕೇಳಕ್ಕೆ ಬರುತಾರೆ ಬಂದೋರಿಗೆಲ್ಲಾ ಉತ್ತರ ಹೇಳಬೇಕಾದರೆ ಆಗ ಗೊತ್ತಾಗತ್ತೆ ಕಷ್ಟ.

ಗೋಪಾಲ:—ಹೋಗಲಿ ಇದುವರಿಗೂ ಬಂದೋರಿಗೆ ಏನು ಹೇಳುತಿದ್ದಿರಿ.

ಸೀತಮ್ಮ:—ಇನ್ನೂ ಚಿಕ್ಕೋನು, ಏನು ಅವಸರ ಅಂತ ಅಂದ್ವು. **M. A.** ಆಗೋವರೆಗೂ ಮಾಡೋಲ್ಲ ಅಂದ್ವು. ಈ **M. A.** ನೂ ಆಯ್ತು; ೨೪ ವರ್ಷ ಆಯ್ತು. ಇನ್ನೇನು ಹೊಟ್ಟೆಗಿಲ್ವೇ, ಬಟ್ಟೇ ಗಿಲ್ವೇ, ಇಲ್ಲ ದುಡ್ಡಿನ ತಾಪತ್ರಯವೇ ? ಏನೊಂತ ಸಬೂಬು ಹೇಳೋದು ಹೇಳು.

ಗೋಪಾಲ:—ಹುಡುಗೀನ ಅವನು ಒಪ್ಪಬೇಕು ಅಂತ ಹೇಳಿ.

ಸೀತಮ್ಮ:—ಹಾಗಾದರೆ ಚನ್ನಾಗಿರೋಳು ಬಂದ್ರೆ ಮದುವೆಗೆ ಒಪ್ತೀ ತಾನೆ? ಈಗ ಅದೇ ಮಾತಾಡ್ತಿದ್ದೆವು. ರಾಮರಾಯರ ತಂಗಿ ಬಂದಿದ್ದರೂ ಅವರ ಮಗಳನ್ನು ನಿನಗೆ ಕೊಡಬೇಕೂಂತ ಕೇಳೋಕೆ ಗೋಪು! ನಿಜವಾಗಿ–ಆ ಹುಡುಗಿ ಹ್ಯಾಗಿದಾಳೇ ಅಂತೀ. ಕೈ ತೊಳ ಕೊಂಡು ಮುಟ್ಟಬೇಕು. ಒಳ್ಳೇ ಭಂಗಾರದ ಬೊಂಬೆ ಅನ್ನು.

ಗೋಪಾಲ:—ನಿಮಗೆ ಬೊಂಬೆ ಅಲ್ಲದೋರು ಯಾರಕ್ಕಾ ? ಬಣ್ಣಾಗಿದ್ದರೆ ಭಂಗಾರದ ಬೊಂಬೆ, ಬೆಳ್ಳಗಿದ್ದರೆ ವಿಲಾಯತೀ ಬೊಂಬೆ, ಕಪ್ಪಗಿ

ದ್ರೆನೂ, ನವರಾತ್ರಿ ಪಟ್ಟದ ಬೊಂಬೆ. ಅಂತೂ ಒಟ್ಟಿನಲ್ಲಿ ಹೆಂಗಸರೆಲ್ಲಾ ಬೊಂಬೆಗಳೇ !

**ಸೀತಮ್ಮ**:—ಸುಮ್ಮನಿರಪ್ಪ ನಿನ್ನ ಮಾತಿಗೇನು. ತುಂಬಾ ಲಕ್ಷಣವಾಗಿದಾಳೆ. ಅಮ್ಮನಿಗೂ ಒಪ್ಪಿತವಾಗಿದೆ. **S. S. L. C** ಗೆ ಕಟ್ಟಿದಾಳಂತೆ. ವೀಣೆ ಹ್ಯಾಗೆ ಬಾರಿಸ್ತಾಳೇ ಅಂತೀ!

**ಗೋಪಾಲ**:—ವೀಣೇನ ಬಾರಿಸ್ತಾಳೇತಾನೆ! ನುಡಿಸೋಲ್ಲ. ಅಲ್ಲದೆ ಈಗ ಕಟ್ಟೀ ಇರೋಳು ಯಾರು! ಇಲ್ಲಿ ನೋಡಕ್ಕಾ, ಮೇಷ್ಟ್ರು ಹೇಳ್ಕೊಟ್ಟರೆ ಹೊರತು ಬೇರೆ ಪ್ರಪಂಚ ಜ್ಞಾನವಿಲ್ಲ. ಸಂಗೀತದ ಮೇಷ್ಟ್ರು ಹೇಳಿ ಕೊಟ್ಟಷ್ಟು ಹೊರತು ಬೇರೇ ಸಂಗೀತ ಜ್ಞಾನವಿಲ್ಲ, ಈಗಿನ ಹುಡುಗೀರಿಗೆ.

**ಸೀತಮ್ಮ**:—ಸಾಕು ಸುಮ್ಮನಿರೋ, ನೀನು ಬಹಳ ಕಲಿತೆ ಈಗ ಅದಿನ್ನೆಂಥವಳನ್ನು ತರ್ತಿರೋ, ನೋಡಬೇಕು. ಅಮ್ಮನಿಗಂತೂ ಹಗಲೂ, ಇರಳೂ ಇದೇ ಯೋಚನೆಯಾಗಿದೆ.

**ಗೋಪಾಲ**:—ಅದೇನಕ್ಕಾ, ನಾನು ಮದುವೆಯಾಗೋದು ನಾಲ್ಕು ದಿನ ತಡವಾದರೆ ಅಮ್ಮಂಗೇನು ಅಂಥಾ ಯೋಚನೆ!

**ಸೀತಮ್ಮ**:—ಇನ್ನೇನು ಹೇಳು. ಅಪ್ಪ ಸತ್ತ ಮೇಲೆ, ನೀನು ದೊಡ್ಡೋನು ಆಗೋವರೆಗೂ, ಈ ಜಮೀನ್‌ದಾರಿ ಆಡಳಿತಕ್ಕೆ ತಲೆ ಕೊಟ್ಟು, ನಿಭಾಯಿಸಿದ್ದಾಯ್ತು. ಏನೋ ನೀನೂ ದೊಡ್ಡವನಾದೆ, ವಿದ್ಯಾಬುದ್ಧಿ ಕಲಿತೆ, ಇನ್ನು ಈ ಯಜಮಾನಿಕೆ ನಿನಗೆ ವಹಿಸಿ, ನಿನ್ನ ಮಕ್ಕಳು ಮರಿ ನೋಡಿಕೊಂಡು, ಆ ಆನಂದದಲ್ಲಿ ತನ್ನ ಹಿಂದಿನ ಶ್ರಮನಾ ಮರೆಯೋಣ ಅಂದ್ರೆ, ನೀನು ಹೀಗೆ ಮದುವೆ ಇಲ್ದೇ ಕೂತಿರು, ಅವಳಿಗೆ ಯೋಚನೆ ಯಾಕ್ಹೇಳು! ಬೇಜಾರು ಅಂತ ನನ್ನ ಕರೆಸಿಕೊಂಡು ಆರು ತಿಂಗಳಾಗ್ತಾ ಬಂತು. ನಾನು ತಾನೇ ಎಷ್ಟು ದಿನ ಇಲ್ಲಿರ್ಲಿ. ನಿಂಭಾವ ದೇವರಂತಹವರು. ಆದ್ದರಿಂದ ಇಷ್ಟು ದಿನ ಇಲ್ಲಿ ಬಿಟ್ಟಿದ್ದಾರೆ. ಮೊನ್ನೇನೇ ಅಮ್ಮ ಹೇಳಿದಳು................

**ಗೋಪಾಲ:**—ಏನಂತಾ ಅಕ್ಕ.

**ಸೀತಮ್ಮ:**—''ಅವನು ಮದುವೆಯಾಗ್ಲಿ, ಬಿಡ್ಲಿ, ಅದು ಅವನ ಇಷ್ಟ. ಈ ಯಜಮಾನಿಕೆ ಅವನಿಗೆ ವಹಿಸಿ, ನಿನ್ನಾ ಗಂಡನ ಮನೆಗೆ ಕಳ್ಸಿ, ನಾನು ಕಾಶೀಗೆ ಹೊರಡ್ತೀನಿ'' ಅಂತ ಅಂದಳು. ಏನೋ ಅಪ್ಪ, ಎಲ್ಲಾರ ಹಾಗೆ ಸುಖ ಪಡೋದು ಅವಳ ಹಣೇಲಿ ಬರೀಲಿಲ್ಲ.

**ಗೋಪಾಲ:**—ನನ್ನ ತಪ್ಪಾಯ್ತು ಅಕ್ಕ. ನನ್ನಿಂದ ಅಮ್ಮನಿಗೆ ಇಷ್ಟು ಕೊರಗೇ! ಅವಳು ಯಾವ ಹುಡುಗೀನೇ ಮದುವೆಯಾಗು ಅನ್ಲಿ, ಅವಳು ಹ್ಯಾಗೇ ಇರಲಿ, ನಾನು ಮದುವೆಯಾಗ್ತೇನೆ. ಇನ್ನೇನು ಸರೀ ತಾನೆ ?

**ಸೀತಮ್ಮ:**—ಗೋಪು ಯಾಕೋ ಹೀಗೆ ಮಾತಾಡ್ತೀ. ನಿನ್ನ ಮನಸ್ಸು ಒಪ್ಪೋ ಹಾಗಿರೋಳನಲ್ಲದೆ, ಬೇರೆ ತಂದು ಗಂಟು ಹಾಕೋಕೆ, ಅಮ್ಮನಿಗೆ ತಾನೇ ಇಷ್ಟವೇ! ನಿನ್ನ ಮುಂದಿನ ಸುಖಕ್ಕೆ ಅವಳು ಅಡ್ಡಿ ಬರುತ್ತಾಳೆಯೇ ? ಈಗ ಬಂದಿರೋ ಹುಡುಗಿ ನೋಡು. ಮನಸ್ಸು ಒಪ್ಪಿದರೆ ಹೂಂ ಅನ್ನು. ನಮಗೇನೋ ಇವಳೇ ನಿನಗೆ ಸರಿ ಯಾದೋಳು ಅನ್ನಿಸುತ್ತೆ. ನಿನಗೆ ಇಷ್ಟವಿಲ್ಲದಿದ್ದರೆ ಬೇರೆ ನೋಡಿದ ರಾಯ್ತು.

**ಗೋಪಾಲ:**—ನನಗೊಂದೇ ಆಶೆ ಅಕ್ಕಾ. ನನ್ನ ಕೊಳಲಿನ ಶೃತಿಗೇ ಸರಿ ಯಾಗಿ ಹಾಡೋ ಅಂತ ಹುಡುಗಿ ಸಿಕ್ಕಿದರೆ ಸಾಕು.

**ಸೀತಮ್ಮ:**—(ನಗುತ್ತಾ) ಗೋಪು, ನೀನು ಕೊಳಲು ಬಾರಿಸು. ಆ ನಿನ್ನ ರಾಧೆ-ಆ ಶೃತಿಗೆ ಸರಿಯಾಗಿ ಹಾಡಲಿ. ನಮ್ಮ ಹಸು ಬಂದು, ನಿನ್ನ ಕಾಲ್ ನೆಕ್ಕೊ ಹಾಗೆ, ಬುದ್ಧಿ ಕಲಿಸು–ಸರ್ಕಸ್‌ನೋರತರಹ, ಆಗ ಬಂದು ಫೋಟೋ ತೆಗೆದರೆ, ''ಅಭಿನವ ಗೋಪಾಲಕೃಷ್ಣ ಮೂರ್ತಿ'' ಅಂತ ಹೆಸರಿಡೋಣ.

**ಗೋಪಾಲ:**—ನಿನಗೆ ಹಾಸ್ಯ ಅಕ್ಕಾ, ನಂಬೋಲ್ಲ. ಸಂಗೀತ ಅಂದ್ರೆ ನನ ಗ್ಯಾಕೆ ಮೃಗ ಪಕ್ಷಿಗಳೂ ಸಹಾ ಮೈ ಮರಿತ್ವೆ.

**ಸೀತಮ್ಮ**:—ಗೋಪು ನೀನು ಈ ಲಲಿತನ್ನ ನೋಡು, ಹಾಡಿಸಿ ಕೇಳು ದೈವೇಚ್ಛೆಯಿದ್ದರೆ ಆಗುತ್ತೆ. ಏನೋ ಅಪ್ಪ, ಈ ಹುಡುಗೀನೀನೆ ಮದುವೆಯಾಗೋದು, ನಮಗೆಲ್ಲಾ ತುಂಬಾ ಸಂತೋಷ.

**ಗೋಪಾಲ**:—ಸರಿ ಅಕ್ಕಾ (ಹೊರಡುವನು)

**ಸೀತಮ್ಮ**:—ಎಲ್ಲೀಗೋ ಹೊರಟೀ. ಇವತ್ತು ದೇವಸ್ಥಾನದಲ್ಲಿ ಮನೆ ಮಂಗಳಾರತಿ ಗೊತ್ತೇ. ಬೇಗಲೇ ಬಂದ್ಬಿಡಿ ಅಂತ ಅರ್ಚಕರು ಹೇಳಿದರು. ಆದ್ದರಿಂದ ಮನೇಲೆ ಇರು. ಅಮ್ಮಾ ಪುರಾಣಕ್ಕೆ ಹೋಗಿದ್ದಾಳೆ; ಬಂದು ಕರಿ ಅಂದಿದ್ದಾಳೆ ನಾನು ಹೋಗಿಬರ್ತೀನಿ. ಮನೇಲಿ ಯಾರೂ ಇಲ್ಲ (ಹೋಗುವಳು)

**ಗೋಪಾಲ**:—ಹಾಗಾದರೆ ಅಮ್ಮನಿಗೆ ಇಷ್ಟು ಬೇಜಾರಾಗಿದೆಯೇ. ಇನ್ನು ನಾನು ಹಟ ಹಿಡೀಬಾರ್ದು. ಅವಳ ಮನಸ್ಸಿಗೆ ಸಂತೋಷವಾಗೋ ಹಾಗೆ ಮಾಡೋದೇ ನನ್ನ ಮುಖ್ಯ ಕರ್ತವ್ಯ.

(ಕೊಳಲನ್ನು ನುಡಿಸುತ್ತಾ ಭೈರವಿ ಆಲಾಪನೆಯಲ್ಲಿ ಮಗ್ನನಾಗಿರುವನು)

**ಲಲಿತ**:—(ಪ್ರವೇಶಿಸಿ) ಸೀತಮ್ಮಾ, ಸೀತಮ್ಮಾ (ಗೋಪಾಲ ಮೂರ್ತಿಯನ್ನ ನೋಡಿ ಸುಮ್ಮನೆ ನಿಲ್ಲುವಳು) [ಊದುವಿಕೆಯಲ್ಲಿ ಮಗ್ನನಾಗಿದ್ದ ಅನು ಹಟಾತ್ತನೆ ಕತ್ತೆತ್ತಿ ನೋಡಿ]

**ಗೋಪಾಲ**:—ಯಾರು !!

**ಲಲಿತ**:—ಸೀತಮ್ಮನವರು ಮನೇಲಿ ಇಲ್ವೇ ?

**ಗೋಪಾಲ**:—ಇಲ್ಲ ಎಲ್ಲೋ ಹೋಗಿದ್ದಾರೆ. ಏನು ಬಂದಿದ್ರಿ ?

**ಲಲಿತ**:—(ತಟ್ಟೆಯಲ್ಲಿದ್ದ ಹಾರವನ್ನು ಕೊಡುತ್ತಾ) ಈ ಹಾರನ ಕೊಟ್ಟು ಹೋಗೋಣ ಅಂತ ಬಂದೆ. ಹಾಗಾದರೆ ಇಲ್ಲಿಡ್ತೀನಿ. ಅವರು ಬರುತ್ತಲೇ ಹೇಳಿ.

**ಗೋಪಾಲ**:—ಅದೇನು ಹಾರ ತಂದಿರೋದು ಯಾರಿಗೋಸ್ಕರ ಕಟ್ಟಿದೀರಿ.

**ಲಲಿತ:**—ಯಾರಿಗ್ಯಾಕೆ! ಈ ದಿನ ಗೋಪಾಲಕೃಷ್ಣಸ್ವಾಮಿಗುಡೀಲಿ ನಿಮ್ಮ ಮನೆ ಮಂಗಳಾರತಿ ಅಂದ್ರು. ಸ್ವಾಮಿಗಾಗಲಿ ಅಂತ ಕಟ್ಟಿ ತಂದೆ.

**ಗೋಪಾಲ:**—ಅದು ಸರಿ, ಹೀಗೆ ಹಾರ ಕಟ್ಟಿ, ಕಟ್ಟಿಕೊಡಬೇಕಾದರೆ; ನಿಮ್ಮ ಮನಸ್ಸಿನಲ್ಲಿ ಏನೋ ಕೋರಿಕೆ ಇರಬಹುದು ಅಂತ ಕಾಣುತ್ತೆ.

**ಲಲಿತ:**—ಅಂಥಾದ್ದೇನೂ ಇಲ್ಲ, ಅಲ್ಲದೆ ಮದುವೆಯಾಗೋವರೆಗೆ, ಹೆಂಗಸರಿಗೆ ಯಾವ ಸಂಕಲ್ಪಕ್ಕೂ ಅಧಿಕಾರವಿಲ್ಲ ಅಂತ ಕೇಳಿದೀನಿ:

**ಗೋಪಾಲ:**—ಆದರೇನು? ಅನುಕೂಲನಾದ ವರ ಸಿಕ್ಕಲಿ ಅಂತ, ಕನ್ಯೆಯರು ದೇವರ ಸೇವೆ ಮಾಡೋಕೆ ಅಧಿಕಾರವಿದೆಯಲ್ಲಾ! ನಿಮ್ಮ ಸೇವೆಗೆ ಭಗವಂತ ಮೆಚ್ತಾನೆ ಅಂತ ನನ್ನ ನಂಬಿಕೆ.

**ಲಲಿತ:**—ಆದರೆ ನನಗೆ ಮಾತ್ರ ಯಾವ ಉದ್ದೇಶವೂ ಇಲ್ಲ. ದೇವರು ನನ್ನ ಸೇವೆಗೆ ಮೆಚ್ಚಿ, ತಾನಾಗಿ ತಾನೇ ಏನಾದರೂ ವರ ಕೊಟ್ರೆ, ನಿರಾಕರಿಸೋ ಅಂಥ ಮೂರ್ಖಳೂ ನಾನಲ್ಲ. ಅದಿರಲಿ, ನಿಮಗೆ ತೊಂದ್ರೆಯಾಯ್ತು ಅಂತ ಕಾಣುತ್ತೆ. ಬಹಳ ಚೆನ್ನಾಗಿ ಕೊಳಲು ನುಡಿಸುತ್ತಿದ್ದಿರಿ. ನಾನು ಬಂದು ನಿಲ್ಲಿಸಿದ ಹಾಗಾಯ್ತು.

**ಗೋಪಾಲ:**—ಏನಿಲ್ಲ. ಏನೋ ಸುಮ್ಮನೆ ಹೊತ್ತು ಕಳಿಯೋಕೆ; ತಕ್ಕಮಟ್ಟಿಗೆ ನುಡಿಸುತ್ತೇನೇ ಹೊರತು ಅಂತ ಚನ್ನಕ್ಕೆ ಸೇರಿದ್ದಲ್ಲ.

**ಲಲಿತ:**—ಭೈರವಿ ರಾಗ ಇಷ್ಟುಮಟ್ಟಿಗೆ ನುಡಿಸಬೇಕಾದರೆ, ಸಾಧಾರಣವಲ್ಲ. ಬಹಳ ದಿನದ ಪರಿಶ್ರಮವಿರಬೇಕು.

**ಗೋಪಾಲ:**—ಹೂಂ! ಹಾಗಾದರೆ ನಿಮಗೂ ಸಂಗೀತ ಪಾಠವಾಗಿದೆ ಅನ್ನಿ.

**ಲಲಿತ:**—ಏನೋ ತಕ್ಕಮಟ್ಟಿಗೆ

**ಗೋಪಾಲ:**—(ನಗುತ್ತಾ) ನಾನು ಬಾರಿಸಿದ್ದು ಭೈರವಿ ಆಲಾಪನೆ ಅನ್ನೋದನ್ನ ಇಷ್ಟು ಬೇಗ ಕಂಡುಹಿಡಿಬೇಕಾದರೆ ನಿಮಗೂ, ತಕ್ಕಮಟ್ಟಿಗೇನು, ಸರಿಯಾದ ಸಂಗೀತಜ್ಞಾನವೇ ಇರಬೇಕು.

ಲಲಿತ:—ಸರಿ ಬಿಡಿ, ಸುಮ್ಮನೇ ಹೊಗಳೋಕೆ ಷುರುಮಾಡಿದಿರಿ. ಅಲ್ಲದೆ ಚಿಕ್ಕೋಳು ನಾನು, ನನಗೆ ಬಹುವಚನದ ಗೌರವ ಬೇರೆ; ಏಕವಚನವೇ ಸಾಕಾಗಿತ್ತು. ಚಿಂತೆಯಿಲ್ಲ. ನಾನು ಬರ್‍ತೀನಿ. ಸೀತಮ್ಮನವರಿಗೆ ಹೇಳಿಬಿಡಿ.

ಗೋಪಾಲ:—ಯಾರು ಬಂದಿದ್ರು ಅಂತ ಹೇಳಲಿ.

ಲಲಿತ:—ರಾಮರಾಯರ ತಂಗಿ ಮಗಳು - ಲಲಿತ ಅನ್ನಿ, ಅದೂ ತಿಳಿಯುತ್ತೆ. (ಹೋಗುವಳು)

ಗೋಪಾಲ:—ಲಲಿತ! ಓ! ಇವಳೇನೋ ಅಕ್ಕ ಹೇಳಿದ ಹುಡುಗಿ. ಪರವಾ ಇಲ್ಲ. ರೂಪೂ ಇದೆ, ಚಾಲಾಕೂ ಇದೆ, ಸಂಗೀತ ಜ್ಞಾನ ಇದೆ. ಆದರೆ ಕಂಠ ಹ್ಯಾಗಿದೆಯೋ ದೇವರೇ ಬಲ್ಲ. ಅದಗೆ ಚನ್ನಾಗಿದ್ರೆ, ನನ್ನ ಪುಣ್ಯವೇಪುಣ್ಯ.

ಸೀತಮ್ಮ:—(ಪ್ರವೇಶಿಸಿ) ಗೋಪು ಏನ್ಮಾಡ್ತೀಯೋ, ಅಮ್ಮಾ ಹಾಗೇ ದೇವಸ್ಥಾನಕ್ಕೆ ಹೋದಳು. ನಿನ್ನೂ ಕರಕೊಂಡು ಬಾ ಬೇಗ ಅಂತ ಅಂದ್ಳು (ಹಾರವನ್ನು ನೋಡಿ) ಇದೇನೋ ಹಾರ! ಯಾರು ತಂದು ಕೊಟ್ರು.

ಗೋಪಾಲ:—ನಾನು ಕೊಳಲು ಊದುತಾ, ಕೂತಿದ್ದೆ. ಅದ್ಯಾವುದೋ ಹುಡುಗಿ ತಂದಿಟ್ಟು ಹೋದಳು.

ಸೀತಮ್ಮ:—ಯಾರು! ಗೋಪು ನೀನು ಮಾತಾಡಿಸಲಿಲ್ಲವೇ? ಯಾರು ಅಂತ ಕೇಳಲಿಲ್ಲವೇ? ಹ್ಯಾಗಿದ್ದಳೋ ನೋಡೋಕೆ?

ಗೋಪಾಲ:—ನಾನ್ಯಾಕಕ್ಕಾ ನೋಡಲಿ, ಹ್ಯಾಗಿದಾಳೆ ಅಂತ ಕಂಡೋರ ಮನೆ ಹುಡುಗೀನ; ಯಾರು ತಂದಿಟ್ರು ಅಂತ ಹೇಳಲಿ, ಅಂತ ಕೇಳಿದಕ್ಕೆ, ಅದ್ಯಾರೋ ರಾಮರಾಯರ ತಂಗಿ ಮಗಳು ಅಂತ ಹೇಳಿದಳು.

ಸೀತಮ್ಮ:—ಓ! ಲಲಿತ ಅನ್ನು ಬಂದಿದ್ದೋಳು. ಅವಳನ್ನೇ ನಿನಗೆ ಕೊಡಬೇಕು ಅಂತಿರೋದು. ಅಯ್ಯೋ ನಾನಿದ್ರೆ ಅವಳ ಕೈಲಿ ಹಾಡಿಸುತ್ತಿದ್ದೆ............ಇದ್ಯಾಕೋ ಹೀಗಿದ್ದೀ-ತಿಳೀತು. ನೀನು ಮಾತಾ

ಡಿಸದೆ ಇದ್ದಿಯಾ, ಕಳ್ಳ. ಅಬ್ಬಬ್ಬಾ! ಈ ಕಾಲದ ಹುಡುಗರನ್ನ ನಂಬೋರು ಯಾರು.

**ಗೋಪಾಲ:**—ಛೇ ಛೇ! ನನಗ್ಯಾಕಕ್ಕಾ ಆ ಹುಡುಗಿ ಸಮಾಚಾರ.

**ಸೀತಮ್ಮ:**—ಛೇನೂ ಇಲ್ಲ, ಛೂನೂ ಇಲ್ಲ. ಇರಲಿ. ಚನ್ನಾಗಿದ್ದಾಳ್ಯೇ ನಿನ್ನ ಮನಸ್ಸಿಗೆ

**ಗೋಪಾಲ:**—ನಾನು ಮೊದಲೇ ಹೇಳಿದೆನಲ್ಲಾ-ನಿನ್ನ ಮನಸ್ಸಿಗೆ, ಅಮ್ಮನ ಮನಸ್ಸಿಗೆ ಒಪ್ಪಿದರೆ ಸರಿ ಅಂತ.

**ಸೀತಮ್ಮ:**—ಹಾಗಾದರೆ ನಿನಗೆ ಒಪ್ಪಿಗೆ ಇಲ್ಲ ಅನ್ನು. ಬಿಡು. ಒಪ್ಪೋ ಅಂಥೋಳು ಸಿಕ್ಕುವವರೆಗೂ ಏನು ಸೂರೆ ಹೋದ್ದು. ಇವತ್ತಲ್ಲಾ, ನಾಳೆ ಸಿಕ್ಕೇ ಸಿಕ್ತಾಳೆ. ಹೋಗಲಿ ನಡಿ. ದೇವಸ್ಥಾನಕ್ಕೆ ಹೋಗೋಣ.
(ಹೊರಡುವರು) ತೆರೆ.

## [ದೃಶ್ಯ ೭. ದೇವಸ್ಥಾನ]

[ದೇವಾಲಯದಲ್ಲಿ ಹೆಂಗಸರೂ, ಗಂಡಸರೂ ತುಂಬಿದ್ದಾರೆ. ಗೋಪಾಲ ಮೂರ್ತಿಯೂ ಗಂಡಸರ ಬಳಿಯಲ್ಲಿದ್ದಾನೆ; ಲಲಿತ ಸೀತಮ್ಮನ ಬಳಿಯಲ್ಲಿದ್ದಾಳೆ. ಮಹಾ ಮಂಗಳಾರತಿ ಸಮಯ. ಸ್ವಾಮಿಗೆ ರಾಜೋಪಚಾರ ನಡೆಯುತ್ತಿದೆ]

**ಅರ್ಚಕ:**—ಕಲ್ಯಾಣಗುಣ ಪರಿಪೂರ್ಣ ಸ್ವಾಮಿನ್ ಪರಾಕ್, ಕಲ್ಯಾಣೀ ಗಮವಧಾರಯ.

(ವಾಲಗದವರು ಕಲ್ಯಾಣೀ ರಾಗ ಬಾರಿಸುವರು)

**ಅರ್ಚಕ:**—ಓಂ ಸ್ವಸ್ತಿ. ವೀಣಾವಾದನ ಪ್ರಿಯಸ್ವಾಮಿನ್ ಪರಾಕ್-ವೀಣಾವಾದನ ಮವಧಾರಯ. (ವೀಣೆಯಲ್ಲಿ ಶಂಕರಾಭರಣ ರಾಗಾಲಾಪನ ನಡೆಯುವುದು)

**ಅರ್ಚಕ:**—ಓಂ ಸ್ವಸ್ತಿ. ವೇಣುವಾದನ ನಿಪುಣ ಸ್ವಾಮಿನ್ ಪರಾಕ್-ವೇಣುವಾದನ ಮವಧಾರಯ.

**ಧರ್ಮದರ್ಶಿ:**—ಸ್ವಾಮಿ ಗೋಪಾಲ ಮೂರ್ತಿಗಳೇ ಕ್ಷಮಿಸಬೇಕು. ಸ್ವಾಮಿ ಸನ್ನಿಧಿಯಲ್ಲಿ ತಾವು ಕೊಳಲು ನುಡಿಸಬೇಕು ಅಂತ ಪ್ರಾರ್ಥನೆ.

**ಗೋಪಾಲ:**—ಆಗಲಿ ತಮ್ಮ ಸಂತೋಷ. (ಕೊಳಲಿನಲ್ಲಿ ಕೇದಾರಗೌಳ ರಾಗಾಲಾಪನೆ ಮಾಡುವನು)

**ಅರ್ಚಕ:**—ಓಂ ಸ್ವಸ್ತಿ. ಸಂಗೀತ ಪ್ರಿಯ ಸ್ವಾಮಿ ಪರಾಕ್–ಸಂಗೀತ ಮವಧಾರಯ — ಯಾರಾದರೂ ಪರಮಾತ್ಮನೆದುರಿಗೆ ಹಾಡಬೇಕು.

**ಸೀತಮ್ಮ:**—ಲಲಿತ, ಎಲ್ಲಿ ಒಂದು ದೇವರನಾಮ ಹೇಳಮ್ಮ, ಭಗವಂತನೆ ದುರಿಗೆ ಸಂಕೋಚಪಡಬೇಡ.

**ಲಲಿತ:**—(ಅದೇ ಕೇದಾರಗೌಳದಲ್ಲಿ "ತನು ನಿನ್ನದು ಜೀವನ ನಿನ್ನದು" ಎಂಬ ಕೀರ್ತನೆ ಹಾಡುವಳು)

**ಅರ್ಚಕ:**—ಓಂ ಸ್ವಸ್ತಿ. "ರಾಜಾಧಿರಾಜಾಯ................(ಇತ್ಯಾದಿ)" ವೇದೋಕ್ತ ಮಂತ್ರ ಪುಷ್ಪಂ ಸಮರ್ಪಯಾಮಿ (ಎಂದು ರಾಜಾಶೀರ್ವಾದ ಹೇಳುವನು. ನಂತರ ಮಂಗಳಾರತಿ ಎಲ್ಲರಿಗೂ ಕೊಡಲ್ಪಡುವುದು)

**ಧರ್ಮದರ್ಶಿ:**—ಆಸ್ತಿಕ ಮಹಾಶಯರಲ್ಲಿ ವಿಜ್ಞಾಪನೆ. ಇಂದಿನ ಸಂಧ್ಯಾದೀಪಾರಾಧನೆಯು, ನಮ್ಮ ಜಮೀನ್ದಾರ್ ಶ್ರೀಮಾನ್ ಗೋಪಾಲಮೂರ್ತಿಗಳಿಂದ ನೆರವೇರಿತು. ಇವರು ತರುಣರು ಮೇಧಾವಿಗಳು-ಶ್ರೀಮಂತರು. ಆದರೂ ಆಸ್ತಿಕ ಸಂಪ್ರದಾಯದಲ್ಲಿರುವುದು ನಮಗೆಲ್ಲಾ ಬಹಳ ಸಂತೋಷ. ಒಂದು ವಿಷಯ ಹೇಳಬೇಕು ಎಂದಿದ್ದೇನೆ. ಗೋಪಾಲಮೂರ್ತಿಗಳು ಅನ್ಯಥಾ ಭಾವಿಸಬಾರದು. ಇವರಿನ್ನೂ ಅವಿವಾಹಿತರು. ನಮ್ಮ ಇಚ್ಛೆಯೇನೆಂದರೆ, ಮುಂದಿನ ಉತ್ಸವದೊಳಗೆ ನಮ್ಮ ತರುಣ ಜಮೀನ್ದಾರರು ತಮ್ಮ ಧರ್ಮಪತ್ನಿಯೊಡನೆ ದಯಮಾಡಿಸುವಂತೆ, ಶ್ರೀ ಗೋಪಾಲಕೃಷ್ಣಮೂರ್ತಿಯು ಅನುಗ್ರಹಿಸಲೆಂದು ಪ್ರಾರ್ಥನೆ. ನಾಳೆ ದಿನವನ್ನು ಪ್ಲೀಡರ್ ಶ್ರೀಮಾನ್ ರಾಮರಾಯರು ಸ್ವಾಮಿ ಸೇವೆಗೆ ಒಪ್ಪಿದ್ದಾರೆ. ಶಾಸ್ತ್ರಿಗಳೇ, ಇನ್ನು ಗೋಪಾಲ ಮೂರ್ತಿಗಳಿಗೆ ತೀರ್ಥ ಪ್ರಸಾದ ಕೊಟ್ಟು ನಂತರ ರಾಮ

ರಾಯರಿಗೆ ಕೊಡಿ. ಆ ಮೇಲೆ ಎಲ್ಲರು ಪ್ರಸಾದ ಸ್ವೀಕರಿಸಿ ಹೋಗ ಬೇಕಾಗಿ ಪ್ರಾರ್ಥನೆ.

**ಅರ್ಚಕ:**—ಸ್ವಾಮಿ ಗೋಪಾಲ ಮೂರ್ತಿಗಳೇ, ದಯಮಾಡಿಸಿ. ಈ ಪ್ರಸಾದ ಸ್ವೀಕರಿಸಿ [ಎಂದು ತೀರ್ಥವನ್ನು ಕೊಟ್ಟು ಕೊರಳಿಗೆ ಹಾರ ಹಾಕುವನು. ಅದು ಲಲಿತ ಕಟ್ಟಿದ ಹಾರವಾದ್ದರಿಂದ ಗೋಪಾಲ ಮೂರ್ತಿ ಅವಳ ಕಡೆ ನೋಡುವನು. ಲಲಿತ ತಲೆ ಬಾಗಿಸುವಳು] ದೀರ್ಘಾಯುಷ್ಮಾನ್ ಭವ—ರಾಮರಾಯರೇ ತಾವು ದಯಮಾಡಿಸಿ.

**ಗೋಪಾಲ:**—(ಮನೆಗೆ ಹೊರಡುವಾಗ್ಗೆ — ತಮ್ಮ ಮನೆಯವರ ಬಳಿಗೆ ಬಂದು) ಲಲಿತ ಈ ಪ್ರಸಾದ ತೆಗೆದುಕೋ. ತಾನಾಗಿ ಬಂದ ಪ್ರಸಾದ ನಿರಾಕರಿಸೋ ಮೂರ್ಖಳು ಅಲ್ಲವಲ್ಲಾ ನೀನು! (ಹಾರ, ಪ್ರಸಾದ ವನ್ನು ಕೊಡುವನು)

**ಸೀತಮ್ಮ:**—(ಲಲಿತ ಹಾರವನ್ನು ತೆಗೆದುಕೊಂಡುದನ್ನು ಕಂಡು) ಏನೋ ಇದು ಗೋಪು. ಲಲಿತನ್ನ ಕೈಗೆ ಕೊಡುತೀಯಾ ನಿನ್ನ ಹಾರಾನ!

**ಗೋಪಾಲ:**—ಇನ್ಯಾರಿಗೆ ಕೊಡಲಕ್ಕಾ, ಕೈಹಿಡಿಯೋಳಿಗಲ್ಲದೆ, ಕೊರಳಿನ ಹಾರ ಸ್ವೀಕರಿಸಕ್ಕೆ ಇನ್ಯಾರಿಗಿದೆ ಅಧಿಕಾರ.

**ಸೀತಮ್ಮ:**—ಹಾಗಾದರೆ ಒಪ್ಪಿದೆ ಅನ್ನು ಲಲಿತನ್ನ ಮದುವೆಯಾಗೋದಕ್ಕೆ-ಯಾವಾಗ ನೋಡಿ ಒಪ್ಪಿಕೊಂಡರೋ ಒಬ್ಬರನ್ನೊಬ್ಬರು ಓ! ತಿಳೀತು; ನಾನು ಮನೇಲಿರಲಿಲ್ಲ ಅವಳು ಹಾರ ತಂದಾಗ. ಆಗ ನಿಶ್ಚಯವಾಯ್ತು, ಈಗ ಸ್ವಯಂವರವಾಯ್ತು, ಏನು ವಿಚಿತ್ರ ಕಾಲ ದವರಪ್ಪಾ ನೀವು.

**ಗೋಪಾಲ:**—ಇನ್ನೇನಕ್ಕಾ, ಅಮ್ಮನಿಗೆ ಯೋಚನೆ ತಪ್ಪಿತಲ್ಲಾ ಅಷ್ಟೇ ಸಾಕು.

ಸೀತಮ್ಮ:—ಆ ಹಾ ಹಾ! ಅಲ್ವೇ! ಸಧ್ಯ ನಿನ್ನ ಮನಸ್ಸಿಗೆ ಒಪ್ಪೋ ಹಾಗೆ ಹಾಡೋಳು ಸಿಕ್ಕಿ, ನಿನ್ನ ಪ್ರತಿಜ್ಞೆ ಪೂರ್ತಿಯಾಯಿತಲ್ಲಾ ಹೇಳು.

ಗೋಪಾಲ:—ಎಲ್ಲಾ ನಿನ್ನ ಸಂತೋಷ ಅಕ್ಕ.

ಸೀತಮ್ಮ:—ನಂದೇನು ಬಿಡು. ದೇವರ ದಯೆ, ಲಲಿತನ ಪುಣ್ಯ.

(ತೆರೆ)

—————

# ನಮ್ಮ ಪ್ರಕಟನೆಗಳು

---

**ಹಾರ್ಮೋನಿಯಂ ಮತ್ತು ಸಂಗೀತ ಬೋಧಿನಿ:—**

ಜೂನಿಯರ್ ಸಂಗೀತ ಕಲಾ ಪರೀಕ್ಷೆಯ ಪಾಠ ವಿಷಯಗಳಿಗನು ಸಾರವಾಗಿ ಹೊಸದಾಗಿ ಪರಿಶೋಧಿಸಿ ಬರೆದಿರುವ ಗ್ರಂಥ.

ಬೆಲೆ ರೂ 1 - 4 - 0

**ಶಿವಾನಂದಲಹರಿ:—**

ಶ್ರೀ ಶಂಕರ ಭಗವತ್ಪಾದಾಚಾರ್ಯ ಪ್ರಣೀತ ೧೦೦ ಶ್ಲೋಕಗಳುಳ್ಳ ಪರಶಿವನ ಸ್ತೋತ್ರ ಟೀಕು, ತಾತ್ಪರ್ಯ ಸಹಿತ. ಬೆಲೆ 10 ಆಣೆ

**ನಳಪಾಕ:—**

ಬೀಬಿನಾಚ್ಚಿಯಾರ್, ಶಬ್ಧವೇದಿ, ನಳಪಾಕ, ಸ್ವಯಂವರ ಈ ನಾಲ್ಕು ಏಕಾಂಕ ನಾಟಕಗಳ ಸಂಗ್ರಹ. ಬೆಲೆ 12 ಆಣೆ

## ' ಧನ್ವಂತರ ಕೃತಿಗಳು '

**ಶ್ರೀ ಸಾಯಿಬಾಬಾ:—**(ಜೀವನ ಚರಿತ್ರೆ)

ಇಡೀ ಭಾರತದಲ್ಲಿ ಪ್ರಸಿದ್ಧಿ ಹೊಂದಿರುವ ಈ ಮಹಾತ್ಮರ ಚರಿತ್ರೆಯನ್ನು ನಿಬಂಧ ರೂಪವಾಗಿಯೂ ಈ ಸಾಧುವರ್ಯರು ನಡೆಯಿಸಿದ ಹಲವು ಮಹಾ ಮಹಿಮೆಗಳು ವರ್ಣಿತವಾಗಿಯೂ ಇರುವ ಚರಿತ್ರೆ.

ಬೆಲೆ ರೂ 1 - 4 - 0

**ರಾಗಮಿಲನ:—(ಕವನ ಸಂಗ್ರಹ)**

ಬಗೆ ಬಗೆಯ ರಾಗಗಳಲ್ಲಿ ಹಾಡುವುದಕ್ಕೆ ಒಗ್ಗುವಂತಿರುವ ಉತ್ತಮ ಸಂಗ್ರಹ. ಬೆಲೆ 12 ಆಣೆ

ಕಾದಂಬರಿಗಳು

**ಹುಣ್ಣಿಮೆಯ ರಾತ್ರಿ**

ಕಲಾಜೀವಿಯೊಬ್ಬನ ಧ್ಯೇಯಪೂರ್ಣ ಜೀವಿತ ಎಷ್ಟು ಕಷ್ಟ ತೊಂದರೆ ತಾಪತ್ರಯ ಮಧ್ಯೆ ಬಿದ್ದದ್ದು ಹೇಗೆ ಸಾಗಿತು ಎಂಬುದನ್ನು ಕುರಿತು ವಿಸ್ತರಿಸುವ ಚಿತ್ರ. ಬೆಲೆ 12 ಆಣೆ

**ಜ್ಞಾನಪ್ರಭಾ:—**

ಯುದ್ಧ ಕಾಲದಲ್ಲಿ ಭಾರತಕ್ಕೂ ಇತರ ದೇಶಗಳಿಗೂ ಉಂಟಾದ ಬಾಂಧವ್ಯದ ಪರಿಣಾಮವಾಗಿ ಹೊಸ ಸನ್ನಿವೇಶವೊಂದನ್ನು ಪರಿಚಯ ಮಾಡಿ ಕೊಡುವ ಕಥೆ. ಬೆಲೆ 1 ರೂಪಾಯಿ

**ಪುನರಾಗಮನ:—**

ನಾಡು, ನುಡಿ, ಸಂಸ್ಕೃತಿ ಹೀಗೆ ಸರ್ವತೋಮುಖ ವಿಷಯಗಳನ್ನೊಳಗೊಂಡು, ಓದಲು ಚಿತ್ತಾಕರ್ಷಕ ವಾಗಿರುವ ಕಾದಂಬರಿ.

ಬೆಲೆ ರೂ 1 - 4 - 0